# ಮುನ್ನುಡಿ

ಇಂದು ಜೀವನದ ಉದಾತ್ತ ತತ್ತ್ವಗಳು, ಆದ್ಯ ವಿಷಯಗಳು ಎಲ್ಲವೂ ದುರಾಕ್ರಮಣಕ್ಕೊಳಗಾಗಿ ವಿಪನ್ನಾವಸ್ಥೆಯಲ್ಲಿವೆ. ತಾತ್ಕಾಲಿಕ ಸುಖವೇ ಜೀವನದ ಪರಮ ಸಾಧನವೆಂಬ ಮಾಯೆಯ ಮೋಡ ಇಂದು ನಮ್ಮ ಜೀವನವನ್ನು ಆಚ್ಛಾಸಿಸಿದೆ.

ಕಲಾ ಪ್ರಪಂಚದಲ್ಲಿ ನಡೆಯುತ್ತಿರುವ ವಿದ್ಯಮಾನಗಳ ಒಳನೋಟವನ್ನು ಚಿತ್ರಿಸಲು 'ಭುವನಮೋಹಿನಿ' ಕಾದಂಬರಿ ಪ್ರಯತ್ನಿಸಿದೆ.

ದೊಡ್ಡದು ಎಂದು ನಾವು ಭಾವಿಸುತ್ತಿರುವ ಎಲ್ಲದರ ಮೇಲೆ ಆಗುತ್ತಿರುವ ಆಘಾತಗಳತ್ತ ವಿಚಾರಶೀಲರು ಲಕ್ಷ್ಯಕೊಡಬೇಕು.

ನಾಡು ಸುಭದ್ರವಾಗಬೇಕಾದರೆ ಅದರ ಸರ್ವಾಂಗಗಳೂ ಸಪ್ರಮಾಣವಾಗಿ ಬೆಳೆಯ ಬೇಕಾದುದಗತ್ಯ, ಕಲೆಯೂ ರಾಷ್ಟ್ರಜೀವನದ ಒಂದು ಅಂಗ. ಪೂರ್ವ - ಪ್ರಾಚ್ಯಗೋಳಗಳ ಮೇಲೆ ವಿಸ್ತರಿಸುತ್ತಿರುವ ಈ ಕಾದಂಬರಿಯ ಕಥಾವಸ್ತು ಇಂದಿನ ಹಿರಿಯರ ಒಳಜೀವನದ ಮೇಲಣ ಅವಕುಂಠನವನ್ನು ತೆಗೆದಿದೆ.

ಈ ಕಾದಂಬರಿಯನ್ನು ಪ್ರಕಟಿಸಿರುವ ಸ್ಟ್ಯಾಂಡರ್ಡ್ ಬುಕ್ ಡಿಪೋ ಒಡೆಯರಾದ ಗೆಳೆಯ ಶ್ರೀ ಎಚ್ ಕಮಲಾನಾಥ್ ಅವರಿಗೆ ನನ್ನ ನೆನಕೆ ಸಲ್ಲುತ್ತದೆ.

ತಾ|| ೧-೯-೧೯೬೦ ಅ. ನ. ಕೃ

ಭುವನಮೋಹಿನಿ

೧

"ಹೊನ್ನಪ್ಪನವರು ಯಾರು?" ಎಂದು ಅಂಬುಜಮ್ಮ ಮಗಳನ್ನು ಕೇಳಿದರು.

ಮೋಹಿನಿ ನಕ್ಕು, "ಹೊನ್ನಪ್ಪನವರು ಯಾರು ಎಂದು ಕೇಳುವೆಯಲ್ಲಮ್ಮಾ. ಕಾಂಗ್ರೆಸ್ಸಿನ ದೊಡ್ಡ ನಾಯಕರು- ಸಾಹುಕಾರರು."

"ಕಾಂಗ್ರೆಸ್ ನಾಯಕರಿಗೂ ನಿಮ್ಮ ಕಾಲೇಜ್ ವಾರ್ಷಿಕೋತ್ಸವಕ್ಕೂ ಏನೇ ಸಂಬಂಧ?"

"ಕಿರೀಟ ಹೇಗೆ ಸರ್ವಾಧಿಕಾರದ ಚಿನ್ಹೆಯೋ ಹಾಗೇ ಬಿಳೀಟೋಪಿ ಸರ್ವಜ್ಞತೆಯ ಚಿನ್ಹೆ ಕಣಮ್ಮ. ಅವರು ಹೊಗಳಿದ್ದು ಕೇಳಿ ನಮ್ಮ ಪ್ರಿನ್ಸಿಪಾಲ್ ಹಿಗ್ಗಿಹೋದರು."

ಮಗಳು ತಂದಿದ್ದ ದೊಡ್ಡ ಬೆಳ್ಳಿಯ ಕಪ್ಪನ್ನೇ ನೋಡುತ್ತ ಅಂಬುಜಮ್ಮ

"ಮೋಹೀ, ಇನ್ನು ಈ ಹುಚ್ಚು ಕುಣಿತ ಸಾಕು ಕಣೇ !" ಎಂದರು.

ತಾಯಿಯ ಅಜ್ಞಾನಕ್ಕೆ ಕನಿಕರಪಡುತ್ತಾ ಮೋಹಿನಿ,

"ಎಣ್ಣೆ ಬರುವ ಹೊತ್ತಿನಲ್ಲಿ ಯಾರೋ ಕಣ್ಣು ಮುಚ್ಚಿಕೊಂಡರಂತೆ !"

"ಹಾಗೆಂದರೇನೇ ?"

"ಶಂಕರನ್ ಅವರ ಹತ್ತಿರ ನಾನು ಮೂರೇ ವರ್ಷ ಕಲಿತು ಇಷ್ಟು ಪ್ರಗತಿ ಸಾಧಿಸಿದ್ದೇನೆ. ನನ್ನ 'ಅರಂಗೇತ್ರ' ವೆಂದರೆ ಜನ ಬಾಯಿ ಬಾಯಿ ಬಿಡುತ್ತಾರೆ. ಈ ವರ್ಷ ಕಾಲೇಜ್ ಮುಗಿದ ಕೂಡಲೆ ಅಡೆಯಾರಿಗೆ ಹೋಗಿ 'ಕಲಾಕ್ಷೇತ್ರ'ದಲ್ಲಿ ಒಂದೆರಡು ವರ್ಷ ಉಚ್ಚ ಶಿಕ್ಷಣ ಪಡೆಯಬೇಕೆಂದಿದ್ದೇನೆ. ಹೊನ್ನಪ್ಪನವರು ಕೂಡ 'ಮೋಹಿನಿ ದೇವಿ ಅಸಾಧಾರಣ ಕಲಾವಿದೆ. ಇವರು ಒಂದೆರಡು ವರ್ಷ ಕಲಾಕ್ಷೇತ್ರದಲ್ಲಿಯೋ, ಕೇರಳ ಕಲಾಮಂಡಲದಲ್ಲಿಯೋ ಶಿಕ್ಷಣ ಪಡೆದರೆ ನಮ್ಮ ದೇಶಕ್ಕೆ ಕೀರ್ತಿ ತರುವಂಥ ಕಲಾವಿದೆಯರಾಗುತ್ತಾರೆ' ಎಂದರು. ಅಷ್ಟೇ ಅಲ್ಲ.........."

"ಹೇಳು."

"ತಮ್ಮ ಅಧ್ಯಕ್ಷ ಭಾಷಣ ಮುಗಿಸಿದ ಮೇಲೆ ಹೊನ್ನಪ್ಪನವರು ಒಳಗೆ ಬಂದು, ನನ್ನ ಕೈ ಕುಲುಕಿ 'ಸರ್ಕಾರದವರು ಹೊರಗಿನಿಂದ ಬರುವ ಖ್ಯಾತ ಅತಿಥಿಗಳಿಗಾಗಿ ಏರ್ಪಡಿಸುವ ಸತ್ಕಾರಕೂಟಗಳಲ್ಲಿ ನಿಮ್ಮ ಪ್ರದರ್ಶನ ಏರ್ಪಡಿಸುತ್ತೇನೆ. ವಿದೇಶಗಳಿಗೆ ನಾವು ಕಳಿಸುತ್ತಿರುವ

ಸಾಂಸ್ಕೃತಿಕ ನಿಯೋಗಗಳಲ್ಲಿ ನೀವು ಭಾಗವಹಿಸುವಂತೆ ಮಾಡುತ್ತೇನೆ' ಎಂದು ಹೇಳಿ ನನ್ನ ಅಡ್ರೆಸ್ ತೆಗೆದುಕೊಂಡರು."

ತಾಯಿ ನಿಟ್ಟುಸಿರುಬಿಟ್ಟರು.

"ಸಾಂಸ್ಕೃತಿಕ ನಿಯೋಗ............!"

"ಹೌದಮ್ಮ- ಇಂಗ್ಲೆಂಡ್, ಫ್ರಾನ್ಸ್, ಹಾಲೆಂಡ್, ಡೆನ್ಮಾರ್ಕ್, ಸ್ವಿಟ್ಜರ್ಲೆಂಡ್, ರಷ್ಯಾ ಅಮೇರಿಕಾಗಳಲ್ಲೆಲ್ಲಾ ನನ್ನ ಹೆಸರು ಪ್ರಸಿದ್ಧವಾಗುತ್ತದೆ. ಜನ ಸಿಮ್ಕಿ, ಮೇನಕಾ, ಉದಯಶಂಕರ, ರಾಮಗೋಪಾಲ್ ಶಾಂತಾ ಇವರನ್ನು ಮರೆಯುವಂತೆ ಮಾಡುತ್ತೇನೆ."

"ಮಾಡಬಹುದು !"

"ನಿನಗೆ ಅನುಮಾನವೇ ?"

"ಇಲ್ಲ"

"ನಿನ್ನ ಧ್ವನಿ ...!"

"ಉತ್ತೇಜಕವಾಗಿಲ್ಲ."

ತಾಯಿ ಗದ್ಗದಕಂಠದಿಂದ,

"ಮೋಹೀ, ನಾವು ಗೃಹಸ್ಥರು-ನಟುವರಲ್ಲ."

"ರುಕ್ಮಿಣಿದೇವಿ, ಉದಯಶಂಕರ್, ಮೃಣಾಳಿನಿ ನಟುವರೇ ? ಆ ಕಾಲ ಎಂದೋ ಹೋಯಿತಮ್ಮ ಇಂದು ನಾಟ್ಯ ಸೂಳೆಯರಿಗೆ ಮೀಸಲಾಗಿಲ್ಲ. ಕುಲೀನ ಕುಲೀನೆಯರು ಅದನ್ನು ಕೈಗೆತ್ತಿಕೊಂಡು, ಗೌರವಸ್ಥಾನ ಗಳಿಸಿಕೊಟ್ಟಿದ್ದಾರೆ. ರಷ್ಯಾದಲ್ಲಿ ಕಲಾವಿದರನ್ನು ದೇವರುಗಳಂತೆ ಕಾಣುತ್ತಾರೆ......."

"ಇದು ರಷ್ಯಾ ಅಲ್ಲ ಮೋಹೀ- ಇಂಡಿಯಾ !"

"ನೀನು ಅಪ್ಪ ಕಂಡಿದ್ದ ಇಂಡಿಯಾ ೧೯೪೭ ಕ್ಕೇ ಹೋಯಿತಮ್ಮ ಇದು ಹೊಸ ಇಂಡಿಯಾ-ಸ್ತ್ರೀ ಪುರುಷರಿಗೆ ಈಗ ಸಮಾನವಾದ ಹಕ್ಕು ಬಾಧ್ಯತೆಗಳಿವೆ. ಸ್ತ್ರೀಯರಿಗೂ ಓಟು ಮಾಡುವ ಅಧಿಕಾರ ಬಂದಿದೆ. ಕೆಲವು ಸ್ಟೇಟುಗಳಲ್ಲಿ (State) ಸ್ತ್ರೀಯರು ಮಂತ್ರಿಗಳಾಗಿದ್ದಾರೆ. ಪ್ರಪಂಚ ಶರವೇಗದಲ್ಲಿ ಮುಂದುವರಿಯುತ್ತಿರುವಾಗ ನಾವು ಹಿಂದುಳಿಯಲು ಸಾಧ್ಯವಿಲ್ಲ."

"ಈಗ ನಾವು ಹಿಂದುಳಿದಿದ್ದೇವೆಯೇ?"

ತಾಯಿಯ ಅಗಾಧ ಅಜ್ಞಾನ ಕಂಡು ಮಗಳಿಗೆ ವಿಷಾದವಾಯಿತು.

"ನಾವು ಹಿಂದುಳಿದಿದ್ದೇವೆಂದು ಇಡಿಯ ಪ್ರಪಂಚವೇ ಹೇಳುತ್ತಿದೆಯಲ್ಲಮ್ಮ—"

"ಪ್ರಪಂಚ ಹೇಳಬಹುದು."

"ನೀನು ಒಪ್ಪುವುದಿಲ್ಲ"

"ಖಂಡಿತ ಒಪ್ಪುವುದಿಲ್ಲ."

"……………."

"ಹೆಂಗಸಿಗೆ ಮನೆಯೇ ಪ್ರಪಂಚ; ಗಂಡಸಿಗೆ ಪ್ರಪಂಚವೇ ಮನೆ. ಅವನು ಪ್ರಪಂಚದ ಬೆಳಕಾಗಿ ಸಾಧಿಸುವ ಮಹದ್ಕಾರ್ಯವನ್ನೇ ಹೆಂಗಸು ಮನೆಯ ಬೆಳಕಾಗಿ ಸಾಧಿಸುತ್ತಾಳೆ. ಗಂಡಸು ಮನೆ ಕಟ್ಟುತ್ತಾನೆ - ಯಂತ್ರಗಳನ್ನು ನಿರ್ಮಿಸುತ್ತಾನೆ. ಮನೆ ಕಟ್ಟುವವರನ್ನು ಯಂತ್ರ ನಿರ್ಮಿಸುವವರನ್ನು ಹೆಂಗಸು ತನ್ನ ಉದರದಲ್ಲಿ ಧರಿಸಿ ಪೊರೆದು ಪೋಷಿಸಿ, ಲೋಕಕ್ಕೆ ತರುತ್ತಾಳೆ. ಗಂಡಸು ಮಾಡಬಹುದಾದ ಅನೇಕ ಕೆಲಸಗಳನ್ನು ಹೆಂಗಸು ಮಾಡಬಹುದು; ಹೆಂಗಸು ಮಾಡಬಲ್ಲ ಕೆಲಸಗಳನ್ನು ಗಂಡಸು ಮಾಡಲಾರ. ದೈವಸೃಷ್ಟಿಯನ್ನೇ ಯಾರೂ ಬದಲಿಸಲಾಗುವುದಿಲ್ಲ ಮೋಹಿ."

"ಏಕಾಗುವುದಿಲ್ಲಮ್ಮ ಈಗ ಗರ್ಭನಿರೋಧ ಸಾಧನಗಳು ಬಂದಿವೆ. ಗರ್ಭಧಾರಣೆ ಮಾಡಲು ಬಯಸುವವರ ಇಷ್ಟಾರ್ಥಗಳನ್ನು ಇಂಜಕ್ಷನ್‌ಗಳು ಪೂರೈಸುತ್ತವೆ. ವಿಜ್ಞಾನಿಗಳು ಗಂಡನ್ನು ಹೆಣ್ಣು ಮಾಡುತ್ತಿದ್ದಾರೆ; ಹೆಣ್ಣನ್ನು ಗಂಡುಮಾಡುತ್ತಿದ್ದಾರೆ."

"ಮಾಡುತ್ತಿರಬಹುದು—ಹಿಂದಿನ ಕಾಲದಲ್ಲಿ ರಾಕ್ಷಸರೂ ಹೀಗೇ ಮಾಡುತ್ತಿದ್ದರೆಂದು ಪುರಾಣಗಳು ಹೇಳಿವೆ."

"ಹೋಗಮ್ಮ ನೀನೊಬ್ಬಳು- ಲೋಕವಿಖ್ಯಾತ ವಿಜ್ಞಾನಿಗಳೆಲ್ಲಾ ರಾಕ್ಷಸರೇನಮ್ಮಾ?"

"ಪ್ರಕೃತಿಯ ಧೃತಗತಿಗೆ ವಿರೋಧವಾಗಿ ಹೋಗುವುದೆಲ್ಲಾ ರಾಕ್ಷಸ ವ್ಯಾಪಾರ ಮೋಹಿನಿ. ಇವುಗಳಿಂದ ಲೋಕಕ್ಕೆ ಹಾನಿಯಾಗುವುದೇ ವಿನಾ ಕಲ್ಯಾಣವಾಗುವುದಿಲ್ಲ— ನಾನಂತೂ ಓದುಬರಹ ಕಲಿತವಳಲ್ಲ- ಶಾಲೆ ಕಾಲೇಜಿಗೆ ಹೋದವಳಲ್ಲ, ಆದರೆ ನನ್ನ ಮಾತು ಯಥಾರ್ಥವಾದುವೆಂದು ನಿನಗೇ ಗೊತ್ತಾಗುತ್ತದೆ."

ತಾಯಿಯ ಮಾತಿನಲ್ಲಿ ಮಗಳಿಗೆ ವಿಶ್ವಾಸ ಹುಟ್ಟಲಿಲ್ಲ,

"ಇವಳದ್ದು ಇದ್ದದ್ದೇ ನಿತ್ಯಗೋಳು,"

ಎಂದುಕೊಂಡು, ತನ್ನ ಪಾರಿತೋಷಕ ಕೈಗೆ ತೆಗೆದುಕೊಂಡು ರೂಮಿಗೆ ಹೋದಳು.

ಮೊಟ್ಟಮೊದಲಿಗೆ ಎಂ.ಬಿ.ಬಿ.ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಪ್ರ್ಯಾಕ್ಟೀಸ್ ಆರಂಭಿಸಿದವರಲ್ಲಿ ಡಾ. ಸಾರಂಗಪಾಣಿ ಮೊದಲಿಯಾರರೊಬ್ಬರು.

ಡಾ. ಮೊದಲಿಯಾರರು ಪರೀಕ್ಷೆ ಪಾಸಾದ ಕೂಡಲೆ ಕೆಲಸಕ್ಕೆ ಸೇರಿದ್ದರೆ ರಿಟೈರ್ ಆಗುವ ವೇಳೆಗೆ ಸೀನಿಯರ್ ಸರ್ಜನ್ (Senior Surgeon) ಆಗಬಹುದಾಗಿತ್ತು.

ಆದರವರು ಕೆಲಸಕ್ಕೆ ಸೇರದೆ ಪ್ರೈವೇಟ್ ಪ್ರ್ಯಾಕ್ಟ್ರೀಸ್ (Private Practice) ಆರಂಭಿಸಿದರು.

ಅವರು ಸ್ವತಂತ್ರವೃತ್ತಿ ಕೈಗೊಳ್ಳುವುದಕ್ಕೆ ಒಂದೆರಡು ಕಾರಣಗಳಿದ್ದವು.

ಸಾರಂಗಪಾಣಿಯವರ ತಂದೆ ತಿರುವೇಂಗಡಸ್ವಾಮಿ ಮೊದಲಿಯಾರರು ಸಂಸ್ಥಾನದ ಹುಜೂರ್ ಟ್ರಜರಿಯ ಟ್ರಜರಿ ಆಫೀಸರಾಗಿದ್ದರು. ಅವರ ತಾತ ಕಂದಾಸಾಮಿ ಮೊದಲಿಯಾರರು ಅರಮನೆಯ ಮೋತೀಖಾನೆ ಮ್ಯಾನೇಜರಾಗಿದ್ದರು. ನಾಲ್ಕಾರು ತಲೆಮಾರುಗಳಿಂದ ಈ ಮನೆತನದವರು ಅರಮನೆ, ಸರ್ಕಾರದ ನೌಕರರಾಗಿದ್ದುಕೊಂಡು ದಕ್ಷತೆ, ಸ್ವಾಮಿಭಕ್ತಿ, ಶೀಲಕ್ಕೆ ಹೆಸರಾಗಿದ್ದರು.

ರೆಸಿಡೆನ್ಸಿಯಲ್ಲಿ ಕೆಲಸಕ್ಕಿದ್ದ ತಿರುವೇಂಗಡಸ್ವಾಮಿಯವರ ಸೋದರರು ಲಕ್ಷ್ಮಣಸ್ವಾಮಿ ಮೊದಲಿಯಾರರಿಗೆ ಮಕ್ಕಳಿರಲಿಲ್ಲ. ಅವರು ತಮ್ಮ ಅಣ್ಣನ ಮಗ ಸಾರಂಗಪಾಣಿಯನ್ನು ದತ್ತು ತೆಗೆದುಕೊಂಡು, ಅವನ ಯೋಗಕ್ಷೇಮ ನೋಡಿಕೊಳ್ಳಲಾರಂಭಿಸಿದರು.

ಸಾರಂಗಪಾಣಿ ಬಿ.ಎಸ್‌ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಅವನ ಭವಿಷ್ಯ ಕುರಿತು ಅಣ್ಣ ತಮ್ಮ ಯೋಚಿಸಲಾರಂಭಿಸಿದರು.

ಮಗ ಸರ್ಕಾರಿ ನೌಕರಿ ಸೇರಸೆಂದು ತಿರುವೇಂಗಡಸ್ವಾಮಿಯವರಿಗೆ ಇಚ್ಛೆಯಾಗಿತ್ತು.

“ನಾನೂ, ನೀನೂ, ನಮ್ಮ ತಂದೆ, ತಾತ ಎಲ್ಲರೂ ಸರ್ಕಾರದ ಸೇವೆಯಲ್ಲೇ ಜೀವಸವೆಸಿದ್ದೇವೆ. ಸಾರಂಗಪಾಣಿಯೂ ಇದೇ ಜಾಡು ಹಿಡಿಯುವುದು ಬೇಡ”

ಎಂದು ಲಕ್ಷ್ಮಣಸ್ವಾಮಿ ಮೊದಲಿಯಾರರು ಅಭಿಪ್ರಾಯಪಟ್ಟರು.

“ಸಾರಂಗ ಏನು ಮಾಡಬೇಕು—ನೀನೇ ಹೇಳು ಲಕ್ಷ್ಮಣಸ್ವಾಮಿ ?”

“ಅವನು ಮದರಾಸಿಗೆ ಹೋಗಿ ಎಂ.ಬಿ.ಬಿ.ಎಸ್ ಪರೀಕ್ಷೆ ಮಾಡಿಕೊಂಡು ಬಂದು, ಪ್ರೈವೇಟ್ ಪ್ರ್ಯಾಕ್ಟೀಸ್ ಆರಂಭಿಸಲಿ. ನನ್ನ ಸ್ಥಾನ ಬಲದಿಂದ ನಾನು ಅವನಿಗೆ ಒಳ್ಳೆಯ ಕಕ್ಷಿಗಾರರನ್ನು ಕೊಡಬಲ್ಲೆ. ಸರ್ಕಾರಿ ಕೆಲಸ ಸೇರಿಕೊಂಡು ಒಂದು ವರ್ಷದಲ್ಲಿ ಅವನು ಸಂಪಾದಿಸಬಹುದಾದುದನ್ನು ಒಂದೇ ತಿಂಗಳಲ್ಲಿ ಸಂಪಾದಿಸಬಲ್ಲ.”

ಅಣ್ಣ ತಮ್ಮ ಈ ವಿಷಯ ತೂಗಿನೋಡಿ ಕೊನೆಗೆ ಸಾರಂಗಪಾಣಿಯನ್ನು ಮದರಾಸಿಗೆ ಕಳಿಸಲು ನಿಶ್ಚಯಿಸಿದರು.

ಸಾರಂಗಪಾಣಿ ಎಂ.ಬಿ.ಬಿ.ಎಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಬಂದು ಬ್ರಿಗೇಡ್ ರೋಡಿನಲ್ಲಿ ’ಶ್ರೀ ಕಂದಾ ಫಾರ್ಮಸಿ’ ಆರಂಭಿಸಿದ. ಅದೇ ವರ್ಷ ಅವನ ಲಗ್ನವೂ ಆಯಿತು.

ಮನೆತನದ ಹೆಸರು, ತಂದೆ, ಚಿಕ್ಕಪ್ಪ ಇವರ ಪ್ರಭಾವದಿಂದ ಸಾರಂಗಪಾಣಿಯ ಪ್ರ್ಯಾಕ್ಟೀಸ್ ಕುದುರುತ್ತ ಬಂದು ಐದು ವರ್ಷಗಳಲ್ಲಿ ಅವನು ನಗರದ ಶ್ರೇಷ್ಠ ಡಾಕ್ಟರುಗಳಲ್ಲಿ ಪರಿಗಣಿತನಾದ.

ಮಗನ ಉಚ್ಛ್ರಾಯ ಕಣ್ತುಂಬ ನೋಡಿ ತಿರುವೇಂಗಡ ಮೊದಲಿಯಾರರೂ, ಲಕ್ಷ್ಮಣಸ್ವಾಮಿ ಮೊದಲಿಯಾರರೂ ವೈಕುಂಠವಾಸಿಗಳಾದರು.

ವೃತ್ತಿಗನುಗುಣವಾಗಿ ಡಾ. ಸಾರಂಗಪಾಣಿ ಮೊದಲಿಯಾರರು ಹೆಚ್ಚು ಹೆಚ್ಚಾಗಿ ಐರೋಪ್ಯರ ಸ್ನೇಹ, ಸಂಪರ್ಕ ಬೆಳಸಿದ್ದರು. ಬೌರಿಂಗ್ ಇನ್‌ಸ್ಟಿಟ್ಯೂಟ್, ಮೆಸಾನಿಕ ಲಾಡ್ಜ್ ಸದಸ್ಯರಾಗಿದ್ದ ಡಾ. ಸಾರಂಗಪಾಣಿ ಮೊದಲಿಯಾರರು ತಮ್ಮ ಐರೋಪ್ಯ ಮಿತ್ರರ ಮನೆಗಳ ಸಮಾರಂಭಗಳಿಗೆ ಹೋಗಬೇಕಾಗಿತ್ತು. ಅದರೆ ಅವರನ್ನು ತಮ್ಮ ಮನೆಗೆ ಆಹ್ವಾನಿಸಲು ಸಾಧ್ಯವಿಲ್ಲವಲ್ಲಾ ಎಂಬ ಕೊರಗು ಮೊದಲಿಯಾರರನ್ನು ಬಾಧಿಸುತ್ತಿತ್ತು.

ಮೊದಲಿಯಾರರ ಹೆಂಡತಿ ಅಂಬುಜಮ್ಮ ತೀರ ಹಳೆಯ ಕಾಲದ ಹೆಣ್ಣು ಮಗಳು. ಮಡಿ, ಪೂಜೆ, ವ್ರತ, ನೇಮ, ನಿಷ್ಠೆ ಉಪವಾಸಗಳಲ್ಲಿ ಆಕೆ ತೃಪ್ತಳಾಗಿದ್ದಳು.

ಗಂಡನ ಸ್ನೇಹಿತರೊಂದಿಗೆ ಕೈ ಕುಲುಕುವುದಾಗಲಿ, ಅವರೊಂದಿಗೆ ಚಹಾ ಸೇವಿಸುವುದಾಗಲಿ ಅವಳಿಗೆ ಸಾಧ್ಯವಿರಲಿಲ್ಲ, ಐರೋಪ್ಯರ ಮನೆಗಳಿಗೆ, ಬೌರಿಂಗ್ ಇನ್‌ಸ್ಟಿಟ್ಯೂಟಿಗೆ ಹೋಗುವುದಂತೂ ತುಂಬ ದೂರದ ಮಾತಾಯಿತು.

ಆತಿಥೇಯಳ ಕರ್ತವ್ಯ ನಿರ್ವಹಿಸುವುದಕ್ಕೆ ಮೊದಲಿಯಾರರು ಮಗಳನ್ನು ಸಿದ್ಧಗೊಳಿಸಲು ನಿಶ್ಚಯಿಸಿದರು.

ಬಿಷಪ್ ಕಾಟನ್ ಗರ್ಲ್ ಸ್ಕೂಲಿನಿಂದಲೇ ಮೋಹಿನಿಯ ಶಿಕ್ಷಣ ಆರಂಭವಾಯಿತು.

ಎಸ್. ಎಸ್. ಎಲ್. ಸಿ ಗೆ ಬರುವ ವೇಳೆಗೆ ಪ್ರೌಢೆಯಾಗಿದ್ದ ಮೋಹಿನಿ ಆತಿಥೇಯಳ ಸ್ಥಾನ ಆಲಂಕರಿಸಿ, ತನ್ನ ತಂದೆಯ ಐರೋಪ್ಯ ಮಿತ್ರರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದಳು.

ಹೈಸ್ಕೂಲು ಮುಗಿಸಿ ಕಾಲೇಜು ಸೇರಿದ ಮೋಹಿನಿಗೆ ಅವಳ ಸಹಪಾಠಿ ಶರಾವತಿ ಗೆಳತಿಯಾದಳು.

ಒಂದು ದಿನ ಶರಾವತಿ,

"ನಾಳೆ ನಮ್ಮ ಮನೆಗೆ ಬರುತ್ತೀಯೇನೇ ಮೋಹಿನಿ" ಎಂದು ಕೇಳಿದಳು.

"ಏಕೆ?"

"ನಮ್ಮ ಮೇಷ್ಟ್ರು ಹೊಸ ಪಾಠ ಷುರು ಮಾಡುತ್ತಾರೆ."

"ಯಾವ ಮೇಷ್ಟ್ರೇ?"

"ಡಾನ್ಸ್ ಟೀಚರ್ರು !"

"ಡಾನ್ಸ್ ಬೇರೆ ಕಲೀತಿದ್ದೀಯಾ?"

"ಒಂದು ವರ್ಷದಿಂದ ಕಲೀತಾ ಇದ್ದೀನಿ."

"ಮೇಷ್ಟ್ರು ಯಾರು ?"

"ಶಂಕರನ್— ಮದರಾಸಿನವರು. ತಂಜಾವೂರು ಮಾಣಿಕ್ಯಂ ಅವರ ಶಿಷ್ಯರು."

"ಚೆನ್ನಾಗಿ ಹೇಳಿಕೊಡ್ತಾರೇನೇ ?"

"ನಾಳೆ ಬಾ— ನೀನೇ ನೋಡುವೆಯಂತೆ !"

"ಖಂಡಿತ ಬರ್ತೀನಿ ಶರಾ" ಎಂದಳು.

ಶರಾವತಿಯ ಪ್ರ್ಯಾಕ್ಟೀಸ್ ನೋಡಿದ ಮೋಹಿನಿ, ತಾನೂ ನೃತ್ಯ ಕಲಿಯಲು ನಿರ್ಧರಿಸಿದಳು.

ಮಗಳ ಪ್ರತಿಯೊಂದು ಮಾತನ್ನೂ ವೇದವಾಕ್ಯದಂತೆ ಭಾವಿಸುತ್ತಿದ್ದ ಸಾರಂಗಪಾಣಿ ಮೊದಲಿಯಾರರು ಒಲ್ಲೆಯೆನ್ನಲಿಲ್ಲ.

ಶಂಕರನ್ ಪಾಠ ಅವ್ಯಾಹತವಾಗಿ ಸಾಗಿತು.

ಈ ಶಿಷ್ಯಳಿಂದ ತನ್ನ ಕೀರ್ತಿ, ಭವಿಷ್ಯ ಉಜ್ವಲವಾಗುತ್ತದೆಂದು ಭಾವಿಸಿದ ಶಂಕರನ್ ಶ್ರದ್ಧೆಯಿಟ್ಟು ಮೋಹಿನಿಗೆ ಪಾಠ ಕೇಳಿಕೊಡುತ್ತಿದ್ದ.

ಮೋಹಿನಿಯ ಭರತನಾಟ್ಯ ಪ್ರಾವೀಣ್ಯತೆಯನ್ನು ನೋಡಲು ಸಾರಂಗಪಾಣಿ ಮೊದಲಿಯಾರರು ಹೆಚ್ಚು ಕಾಲ ಬದುಕಲಿಲ್ಲ.

ಅವಳು ಬಿ.ಎ ಕ್ಲಾಸಿಗೆ ಬಂದ ವರ್ಷವೇ ಮೊದಲಿಯಾರರು, ಕೆಲವೇ ದಿನಗಳು ಹೃದ್ರೋಗದಿಂದ ನರಳಿ ದೈವಾಧೀನರಾದರು.

ಅಂಬುಜಮ್ಮ ತಮ್ಮ ದುಃಖ ನುಂಗಿಕೊಂಡು ಮಗಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು.

ಮೋಹಿನಿಯ ಕಾಲೇಜ್ ಶಿಕ್ಷಣ, ಭರತನಾಟ್ಯ ಶಿಕ್ಷಣ ತಡೆಯೆಡೆಯಿಲ್ಲದೆ ಸಾಗಿತು.

ಮೋಹಿನಿ ನಾಟ್ಯ, ನಾಟ್ಯಪ್ರದರ್ಶನಗಳ ಬಗ್ಗೆ ತೋರುತ್ತಿದ್ದ ಅತ್ಯಾಸಕ್ತಿ ಕಂಡು ಅಂಬುಜಮ್ಮನವರ ಮನಸ್ಸಿಗೆ ಕಳವಳವಾಯಿತು.

ಕಾಲೇಜ್ ವಾರ್ಷಿಕೋತ್ಸವದಲ್ಲಿ ಅವಳು ನಾಟ್ಯ ಪ್ರದರ್ಶಿಸಿ ಮನೆಗೆ ಬೆಳ್ಳಿಯ ಕಪ್ ತಂದಮೇಲೆ ಅಂಬುಜಮ್ಮನವರ ಚಿಂತೆ ಮತ್ತಷ್ಟು ಹೆಚ್ಚಿತು.

# ೩

ಮನೆಯೊಳಗೆ ಬಂದ ಆಗಂತುಕನನ್ನು ಸ್ವಾಗತಿಸಿದ ಅಂಬುಜಮ್ಮ,

"ಯಾರು ಬೇಕಾಗಿತ್ತಪ್ಪ" ಎಂದರು

"ಮೋಹಿನಿದೇವಿಯವರನ್ನು ಕಾಣಬೇಕಾಗಿತ್ತು."

"ಕುಳಿತುಕೊಳ್ಳಿ ಬರುತ್ತಾರೆ,"

ಎಂದು ಒಳಗೆ ಬಂದ ಅಂಬುಜಮ್ಮ ಮಗಳಿಗೆ,

"ಮೋಹೀ- ನಿನ್ನ ಯಾರೋ ಹುಡುಕಿಕೊಂಡು ಬಂದಿದ್ದಾರೆ ನೋಡು" ಎಂದರು

ರೂಮಿನಿಂದ ಹೊರಗೆ ಬಂದ ಮೋಹಿನಿ ಆಗಂತುಕನನ್ನು ನೋಡಿ

"ನೀವು ಯಾರು?" ಎಂದು ಕೇಳಿದಳು.

ಆಗಂತುಕ ಅವಳ ಕೈಗೊಂದು 'ಭೆಟ್ಟಿಯ ಚೀಟಿ' (Visiting Card) ಇಟ್ಟ,

ಭೆಟ್ಟಿಯ ಚೀಟಿಯ ಮೇಲೆ ಸಾಹುಕಾರ ಹೊನ್ನಪ್ಪನವರ ಹೆಸರಿದ್ದುದನ್ನು ಮೋಹಿನಿ ನೋಡಿಕೊಳ್ಳಲು ಆಗಂತುಕ,

"ನಾನು ಸಾಹುಕಾರರ ಆಪ್ತ ಸಚಿವ, ಅವರ ಪರವಾಗಿ ಬಂದಿದ್ದೇನೆ"

"ನಿಮ್ಮ ಹೆಸರು ?"

"ಲೋಕಾಭಿರಾಮನ್,"

"ಏನು ಸಮಾಚಾರ ?"

"ಸಾಹುಕಾರರು ನಿಮಗೆ ಅಭಿವಂದನೆ ತಿಳಿಸಲು ಹೇಳಿದ್ದಾರೆ."

"ಕಾಲೇಜಿನಲ್ಲಿ ಅವರೇ ನನಗೆ ಅಭಿನಂದನೆ ತಿಳಿಸಿದರಲ್ಲಾ !"

"ಅವರು ನಿಮ್ಮನ್ನು ಕಾಣಲು ಕಾತರರಾಗಿದ್ದಾರೆ."

"ಏಕೆ ?"

"ನಿಮ್ಮ ನಾಟ್ಯಪ್ರದರ್ಶನಗಳ ವಿಷಯ ಮಾತನಾಡಬೇಕಂತೆ !"

"ನಾನೀಗ ಕಾಲೇಜಿಗೆ ಹೊರಟಿದ್ದೇನೆ."

"ಕಾಲೇಜು ಮುಗಿಯುವುದು ಎಷ್ಟು ಹೊತ್ತಿಗೆ."

"ಮೂರುವರೆಗೆ."

“ನಾನು ನಾಲ್ಕಕ್ಕೆ ಇಲ್ಲಿಗೆ ಬರಲೇ ?”

ಕ್ಷಣಕಾಲ ಯೋಚಿಸಿದ ಮೋಹಿನಿ, “ಇಲ್ಲಿಗೆ ಬರಬೇಡಿ, ಮೂರೂವರೆಗೆ ಕಾಲೇಜಿನ ಬಳಿ ಬನ್ನಿ- ನನ್ನ ಕಾಲೇಜು ಯಾವದು ಗೊತ್ತೇ ?”

“ಗೊತ್ತು- ಮಹಾರಾಣಿ ಕಾಲೇಜು. ಸಾಹುಕಾರರ ಹಳದೀ ಕಾರನ್ನು ನಾನು ಆಕ್ಯುಪೇಷನಲ್ ಇನ್ಸ್‌ಟಿಟ್ಯೂಟ್ (Occupational Institute) ಬಳಿ ನಿಲ್ಲಿಸಿರುತ್ತೇನೆ. ಅಲ್ಲಿಗೇ ಬನ್ನಿ.”

“ಹಾಗೇ ಆಗಲಿ.”

“ನಮಸ್ಕಾರಾಮ್ಮ- ಮೂರೂವರೆಗೆ ಕಾಣುತ್ತೇನೆ”

ಎಂದು ಹೇಳಿ ಲೋಕಾಭಿರಾಮ ನಿಷ್ಕ್ರಮಿಸಿದ.

ಮೂರೂವರೆಗೆ ಕಾಲೇಜ್ ಮುಗಿಸಿಕೊಂಡು ಮೋಹಿನಿ, ಆಕ್ಯುಪೇಷನಲ್ ಇನ್ಸ್‌ಟಿಟ್ಯೂಟ್ ಕಡೆ ಹೊರಟಳು.

ರಸ್ತೆಯ ಬದಿಯಲ್ಲಿ ಕಾರ್ ನಿಲ್ಲಿಸಿಕೊಂಡು, ಅವಳ ದಾರಿಯನ್ನೇ ನೋಡುತ್ತ ನಿಂತಿದ್ದ ಲೋಕಾಭಿರಾಮ ಅವಳು ಬಂದ ಕೂಡಲೆ ಕಾರ್ ಬಾಗಿಲು ತೆಗೆದ.

ಮೋಹಿನಿ ಕಾರಿನೊಳಗೆ ಕುಳಿತಳು.

ಲೋಕಾಭಿರಾಮ ಡ್ರೈವರ್ ಪಕ್ಕದಲ್ಲಿ ಕುಳಿತ.

ಕಾರ್ ಬಂದು ಕಬ್ಬನ್‌ಪಾರ್ಕ್ ರೆಸ್ಟುರಾ ಬಳಿ ನಿಲ್ಲಲು ಮೋಹಿನಿ,

“ಇಲ್ಲೇಕೆ ನಿಲ್ಲಸಿದಿರಿ” ಎಂದಳು.

“ಸ್ವಲ್ಪ ಕಾಫಿ ತೆಗೆದುಕೊಳ್ಳೋಣ”

ಎಂದು ಡ್ರೈವರ್ ಕಡೆ ತಿರುಗಿ,

“ಸಿದ್ದೂ, ಎರಡು ಖಾರ, ಎರಡು ಸಿಹಿ, ಎರಡು ಕಪ್ ಕಾಫಿಗೆ ಹೇಳಿ, ನಿನಗೇನು ಬೇಕೋ ತೆಗೆದುಕೋ” ಎಂದ.

ಸಿದ್ದಪ್ಪ ರೆಸ್ಟುರಾ ಒಳಗೆ ಹೋದ ಐದು ನಿಮಿಷಗಳಲ್ಲಿ ಮಾಣಿ ತಿಂಡಿ, ಕಾಫಿ ತಂದು ಕಾರಿನಲ್ಲಿಟ್ಟು ಹೋದ

ಪ್ಲೇಟನಲ್ಲಿದ್ದ ಬೊಂಬಾಯಿ ಬೋಂಡಾ ತಿನ್ನುತ್ತ ಲೋಕಾಭಿರಾಮ,

“ನೀವು ತುಂಬ ಅದೃಷ್ಟಶಾಲಿಗಳ್ರಮ್ಮ.”

"ಏಕೆ. ಲೋಕಾಭಿರಾಮ್."

"ನಿಮ್ಮ ನಾಟ್ಯ ಪ್ರದರ್ಶನ ನೋಡಿ ನಮ್ಮ ಸಾಹುಕಾರರು ಮುಗ್ಧರಾಗಿ ಬಿಟ್ಟಿದ್ದಾರೆ. ನಿಂತರೆ ಕುಳಿತರೆ ಅದೇ ಮಾತನಾಡುತ್ತಾರೆ. 'ಇಂಥಾ ಕಲಾವಿದರನ್ನು ಮುಂದಕ್ಕೆ ತರಬೇಕು ಲೋಕಾಭಿ. ನಮ್ಮಲ್ಲಿ ಇಂಥ ರತ್ನಗಳಿರುವಾಗ ಸರ್ಕಾರದವರು ಮದರಾಸು, ಮುಂಬಯಿಗಳಿಂದ ಕಲಾವಿದರನ್ನೇಕೆ ಕರೆಸಬೇಕು.' ಅದಕ್ಕೆ ನಾನಂದೆ- 'ಸರ್ಕಾರ ತಮ್ಮದು ಸ್ವಾಮಿ. ಸ್ಥಳೀಯ ಕಲಾವಿದರಿಗೆ ಆಗುತ್ತಿರುವ ಅನ್ಯಾಯ ನೀವು ನಿಲ್ಲಿಸಿದರೆ, ದೇಶಕ್ಕೆ ಮಹೋಪಕಾರ ಮಾಡಿದಂತಾಗುತ್ತದೆ.'

'ನನ್ನ ಶಕ್ತಿಮೀರಿ ಪ್ರಯತ್ನಿಸುತ್ತೇನೆ ಲೋಕಾಭಿ- ಮೋಹಿನಿ ದೇವಿಯನ್ನು ಕರೆದುಕೊಂಡು ಬಾ'

ಎಂದು ಹೇಳಿದರು."

"ಸರ್ಕಾರದಲ್ಲಿ ಸಾಹುಕಾರರ ಮಾತು ಅಷ್ಟು ನಡೆಯುತ್ತದೆಯೇ ಲೋಕಾಭಿರಾಮ್."

ಅವಳ ಅಜ್ಞಾನಕ್ಕೆ ಮರುಗಿದ ಲೋಕಾಭಿರಾಮ,

"ಸರ್ಕಾರ ನಡೆಸುತ್ತಿರುವವರೇ ಸಾಹುಕಾರ ಹೊನ್ನಪ್ಪನವರು ಕಣ್ರಮ್ಮ. ಇವರ ಮಾತು ರಾಮಬಾಣವಿದ್ದಹಾಗೆ ! ಅಧಿಕಾರಿಗಳು, ಮಂತ್ರಿಗಳು ಇವರ ಹೆಸರು ಕೇಳಿದರೆ ಗಡಗಡ ನಡುಗುತ್ತಾರೆ. ಅವರ ಮನೆಯಲ್ಲಿ ನೋಡುವಿರಂತೆ- ಮಾಜಿ ಮಂತ್ರಿಗಳು, ಹಾಲಿ ಮಂತ್ರಿಗಳು, ಭಾವೀ ಮಂತ್ರಿಗಳು ಕೈ ಕಟ್ಟಿಕೊಂಡು ಚಪ್ರಾಸಿಗಳಂತೆ ನಿಂತಿರುತ್ತಾರೆ- ನಿಮಗೆ ನಾನೊಂದು ಮಾತನ್ನು ಹೇಳುತ್ತೇನೆ- ಕೇಳುವಿರಾ?"

"ಹೇಳಿ."

"ಸಾಹುಕಾರರನ್ನು ಕೈಯಲ್ಲಿಟ್ಟುಕೊಳ್ಳಿ. ದೇಶ, ವಿದೇಶಗಳಲ್ಲಿ ನಿಮ್ಮ ಹೆಸರು ಮನೆಮಾತಾಗುವಂತೆ ಅವರು ಮಾಡುತ್ತಾರೆ. ಅನರೇನಮ್ಮ- ದೊರೆಯಂಥ ಮನುಷ್ಯ, ಒಲಿದರೆ ನಾರಿ ಒಲಿಯದಿದ್ದರೆ ಮಾರಿ. ಇನ್ನು ಆರು ತಿಂಗಳು ವರ್ಷದಲ್ಲಿ ಅವರು ನಿಮ್ಮನ್ನು ಇಂಗ್ಲೆಂಡಿಗೆ ಕಳಿಸದಿದ್ದರೆ ನನ್ನ ಕೇಳಿ."

"ಯೂರೋಪ್, ಅಮೇರಿಕಾ, ರಷ್ಯಾ ಪ್ರವಾಸ ಮಾಡಬೇಕೆಂದು ನನಗೆ ತುಂಬ ಆಸೆಯಿದೆ ಲೋಕಾಭಿರಾಮಯ್ಯ. ಉದಯಶಂಕರ್, ಮೇನಕಾ ಯಾವ ಕೀರ್ತಿ ಸಂಪಾದಿಸಿದರೋ ಅದೇ ಕೀರ್ತಿ ಸಂಪಾದಿಸಬೇಕೆಂದು ನನ್ನ ಆಕಾಂಕ್ಷೆ. ಆದರೆ ನಾನು

ಕಲಿಯುವುದು ಇನ್ನೂ ಬಹಳ ಇದೆ. ಈ ವರ್ಷ ನನ್ನ ಕಾಲೇಜ್ ಕೋರ್ಸ್ ಮುಗಿದೊಡನೆಯೇ ಮದರಾಸಿಗೆ ಹೋಗಿ, ಅಲ್ಲಿ ಒಂದೆರಡು ವರ್ಷ ಉಚ್ಚ ಶಿಕ್ಷಣ ಪಡೆಯಬೇಕೆಂದಿದ್ದೇನೆ."

"ಸೊಗಸಾದ ಯೋಚನೆ ಮಾಡಿದ್ದೀರಿ- ಮದರಾಸಿನಲ್ಲಿ ನೀವು ಇರುವುದಕ್ಕೆ ದಕ್ಷ ನಟುವರರ ಹತ್ತಿರ ಶಿಕ್ಷಣ ಪಡೆಯುವುದಕ್ಕೆ ಸಾಹುಕಾರರು ಅನುಕೂಲ ಕಲ್ಪಿಸಿಕೊಡುತ್ತಾರೆ. ಸಾಹುಕಾರರಿಂದ ನಿಮಗೆ ಏನಾಗಬೇಕು ಹೇಳಿ- ನಾನು ಮಾಡಿಸಿಕೊಡುತ್ತೇನೆ. ಆದರೆ ನೀವು..."

"ನಾನು...."

"ನನ್ನ ಮರೆಯಕೂಡದು."

"ನೀವು ಏನು ಮಾಡುತ್ತಿದ್ದೀರಿ ಲೋಕಾಭಿರಾಮಯ್ಯ"

"ನನ್ನದು ದೊಡ್ಡ ಕಥೆ ಬಿಡಿಯಮ್ಮ. 'ಪ್ರಜಾಯೋಗಿ' ಎಂತಾ ಒಂದು ವಾರಪತ್ರಿಕೆ ನಡಸುತ್ತಾ ಇದ್ದೆ. ಸಾವಿರಾರು ರೂಪಾಯಿ ಕೈಬಿಟ್ಟು ಹೋಯಿತು. ಬಹಳ ಕಷ್ಟಕ್ಕೆ ಸಿಕ್ಕಿಕೊಂಡೆ- ಮಾರಾಯರು, ಸಾಹುಕಾರರು ನನ್ನ ಕೈಹಿಡಿದು ಕಾಪಾಡಿದರು."

"ಈಗ ನಿಮ್ಮ ಪತ್ರಿಕೆ ಬರುತ್ತಿಲ್ಲವೇ ?"

"ಇಲ್ಲ- ಅದನ್ನು ಮತ್ತೆ ಹುಟ್ಟಿಹಾಕು ಎಂದು ಸಾಹುಕಾರರು ಹೇಳುತ್ತಿದ್ದಾರೆ. ಎಲೆಕ್ಷನ್ ಹತ್ತಿರ ಬರಲಿ ಎಂದು ಸುಮ್ಮನಿದ್ದೇನೆ. ಇನ್ನು ಹೋಗೋಣ ಹೊತ್ತಾಯಿತು."

ಎಂದು ಹಾರ್ನ್ ಮಾಡಲು ಡ್ರೈವರ್ ಬಂದ.

ಲೋಕಾಭಿ ಅವನ ಕೈಗೆ ಹಣವಿತ್ತು,

"ಹೋಟಲ್ ಬಿಲ್ ಕೊಟ್ಟುಬಿಡು. ಮಾಣಿ ಕರೆದು ಕಪ್ಪು, ಸಾಸರ್ ತೆಗೆದುಕೊಂಡು ಹೋಗು ಎಂದು ಹೇಳು ಸಿದ್ದಪ್ಪ."

ಮಾಣಿ ಬಂದು ಕಪ್ಪು, ಸಾಸರ್‌ಗಳನ್ನು ತೆಗೆದುಕೊಂಡು ಹೋಗಲು ಕಾರ್ ರೆಸಿಡೆನ್ಸಿ ರಸ್ತೆಯ ಕಡೆ ಧಾವಿಸಿತು.

ರೆಸಿಡೆನ್ಸಿ ರಸ್ತೆಯಲ್ಲಿದ್ದ 'ದಿಲ್‌ರುಬಾ' ಬಂಗಲೆ ಮೊದಲು ಸೇಟ್ ಅಲ್ಲಿಖಾನ್ ಸಾಹೇಬರಿಗೆ ಸೇರಿತ್ತು. ಮುಸ್ಲಿಮರ ಆವಶ್ಯಕತೆ, ಆನುಕೂಲ್ಯಗಳಿಗನುಗುಣವಾಗಿ ಸೇಟ್ ಸಾಹೇಬರು ಬಂಗಲೆ ಕಟ್ಟಿಸಿಕೊಂಡಿದ್ದರು.

ಸೇಟ್ ಸಾಹೇಬರ ಉಣ್ಣೆ, ಸಿಲ್ಕು ಬಟ್ಟೆಗಳ ಮೊತ್ತದ ವ್ಯಾಪಾರ (wholesale business) ಎರಡು ದಶಕಗಳು ಒಳ್ಳೆಯ ಭರಾಟೆಯಿಂದ ಸಾಗಿತ್ತು. ಮೈಸೂರು ಬ್ಯಾಂಕಿನವರು ಸೇಟ್ ಸಾಹೇಬರಿಗೆ ಲಕ್ಷರೂಪಾಯಿಯವರೆಗೆ ಓವರ್‌ಡ್ರ್ಯಾಫ್ಟ್ (over-draft) ಕೊಡುತ್ತಿದ್ದುದರಿಂದ ಸಾಹೇಬರು ದುಡ್ಡಿನ ಕೊರತೆಯನ್ನೇ ಕಂಡುದಿಲ್ಲ.

ಸೇಟ್ ಸಾಹೇಬರು ಸಾಕಷ್ಟು ಧನಾಢ್ಯರಾಗಿದ್ದರೂ ಅವರಿಗೆ ಹಣದ ದುರಾಶೆ ತಪ್ಪಲಿಲ್ಲ. ಶರವೇಗದಲ್ಲಿ ಧನಸಂಗ್ರಹಿಸಲು ನಿಶ್ಚಯಿಸಿದ ಸೇಟ್ ಸಾಹೇಬರು 'ಅಶ್ವಯೋಗ'ವನ್ನಾರಂಭಿಸಿದರು. ಅವರಿಗೂ ದಶಾಕಾಲ-ಅಶ್ವಯೋಗದಲ್ಲಿಯೂ ಅವರಿಗೆ ಅಪಾರ ಹಣ ಬರಲಾರಂಭಿಸಿತು. ಸೇಟರು ಕುದುರೆಗಳನ್ನು ಕೊಂಡು ತಾವೇ ಓಡಿಸಲಾರಂಭಿಸಿದರು. ಒಂದಲ್ಲ ಒಂದು ದಿನ ಆಗಾಖಾನರ ಸ್ಥಾನಕ್ಕೆ ಬರಬೇಕೆಂಬುದೇ ಸೇಟರ ಆಕಾಂಕ್ಷೆಯಾಗಿತ್ತು. ಆದರೀ ವೇಳೆಗೆ ಅವರ ದೆಸೆ ಪೂರೈಸಿ ಶನಿ ವಕ್ರನಾದ ಸೇಟರಿಗೆ ವ್ಯಾಪಾರದಲ್ಲಿ ಹೇರಳವಾಗಿ ನಷ್ಟವಾದುದಲ್ಲದೆ ಅವರ ಕುದುರೆಗಳು ಸಾಯಲಾರಂಭಿಸಿದವು. ಸಾಲಕ್ಕೆ ಬ್ಯಾಂಕಿನವರು ವಾರೆಂಟ್ ತೆಗೆದುಕೊಂಡು, ಸೇಟರ ಆಸ್ತಿಪಾಸ್ತಿಗಳನ್ನು ಹರಾಜಿಗೆ ಇಡಿಸಿದರು.

ಬ್ಯಾಂಕಿನ ಹರಾಜಿನಲ್ಲಿ ಸೇಟರ 'ದಿಲ್‌ರುಬಾ' ಬಂಗಲೆಯನ್ನು ಸಾಹುಕಾರ ಹೊನ್ನಪ್ಪನವರು ಇಪ್ಪತ್ತೆಂಟು ಸಾವಿರ ರೂಪಾಯಿಗಳಿಗೆ ಕೊಂಡುಕೊಂಡು, ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡರು.

'ದಿಲ್‌ರುಬಾ' ಬಂಗಲೆಯ ಸೈಟಿನ ಅಗಲ ೧೬೦ ಅಡಿಗಳು, ಉದ್ದ ೨೪೦ ಅಡಿಗಳು. ಸೈಟಿನ ಮಧ್ಯೆ ಬಂಗಲೆ ಕಟ್ಟಲ್ಪಟ್ಟಿದ್ದುದರಿಂದ ಸುತ್ತಲೂ ಖಾಲಿ ಅಧಿವೇಶನವಿತ್ತು. ಗೇಟಿನೊಳಗೆ ಪ್ರವೇಶಿಸಿದ ಬಂಗಲೆ ಪೂರ್ವಮುಖವಾಗಿತ್ತು. ದೊಡ್ಡ ಪೋರ್ಟಿಕೋ (Portico) - ತರುವಾಯ ಬಂಗಲೆಯಗಲಕ್ಕೂ ಇದ್ದ ವೆರಾಂಡ ಒಳಗೆ ಪ್ರವೇಶಿಸಿದರೆ ಒಂದು ವಿಸ್ತಾರವಾದ ಹಜಾರ. ಅದರ ಅತ್ತಿತ್ತ ಎರಡು ರೂಮುಗಳು. ಎಡಭಾಗದ ರೂಮು ಸಾಹುಕಾರರ 'ಆಫೀಸ್' ಆಗಿತ್ತು;

ಬಲಭಾಗದ ರೂಮು ಅವರ ಅತಿಥಿಗೃಹವಾಗಿತ್ತು. ಹಜಾರದಿಂದ ಒಳಗೆ ಪ್ರವೇಶಿಸಿದರೆ ಮತ್ತೊಂದು ಹಜಾರ ; ಅದರ ಅತ್ತಿತ್ತ ಎರಡು ರೂಮುಗಳು ಈ ಎರಡು ರೂಮುಗಳಿಗೂ ಹೊಂದಿಕೊಂಡಂತೆ ಸ್ನಾನಗೃಹ, ಶೌಚಗಳಿದ್ದವು. ಎಡಭಾಗದಲ್ಲಿದ್ದ ರೂಮು ಸಾಹುಕಾರರ ಶಯ್ಯಾಗೃಹವಾಗಿತ್ತು ; ಬಲಭಾಗದ ರೂಮು ಅವರ 'ಡ್ರೆಸ್ಸಿಂಗ್ ರೂಮ್' ಆಗಿತ್ತು. ಎರಡನೆಯ ಹಜಾರದಿಂದ ಒಳಗೆ ಹೋದರೆ ವಿಸ್ತಾರವಾದ ಅಂಗಳ. ಅಂಗಳದ ಬಲಗಡೆಗೆ ಪಾಕಶಾಲೆ, ಸ್ನಾನಗೃಹ, ಉಗ್ರಾಣ ಇತ್ಯಾದಿ. ಅಂಗಳದ ಎದುರಿಗೆ ನಿರುಪಯೋಗಿ ಪದಾರ್ಥಗಳನ್ನು ತುಂಬುವ ಉಗ್ರಾಣ, ಸೇವಕರ ಕೊಠಡಿ.

ಅಂಗಳದೊಳಗೆ ಬರಲು ಉತ್ತರ ದಿಕ್ಕಿನಲ್ಲಿ ಒಂದು ಬಾಗಿಲಿತ್ತು. ಹಾಲು ಮೊಸರಿನವರು, ತರಕಾರಿಯವರು, ಸೇವಕರು ಈ ದ್ವಾರವನ್ನು ಉಪಯೋಗಿಸುತ್ತಿದ್ದರು.

ಬಂಗಲೆಯೊಳಗೆ ಬಂದ ಕಾರು, ಉತ್ತರದ ಬಾಗಿಲಲ್ಲಿ ನಿಂತಿತು.

ಲೋಕಾಭಿರಾಮ್ ಮೊದಲು ಕೆಳಗಿಳಿದು,

"ಬನ್ನಿ" ಎಂದ.

ಮೋಹಿನಿ ಕೆಳಗಿಳಿಯಲು ಅವಳನ್ನು ಕರೆದೊಯ್ದು ಎರಡನೆಯ ಹಜಾರದಲ್ಲಿ ಕುಳ್ಳಿರಿಸಿ,

"ನಾನು ಸಾಹುಕಾರರಿಗೆ ತಿಳಿಸಿಬರುತ್ತೇನೆ,"

ಎಂದು ಹೇಳಿ ಹೋದ.

ಮೋಹಿನಿ ಸುತ್ತಲೂ ನೋಡಿದಳು.

ಹೊನ್ನಪ್ಪನವರು ಹೆಸರಿಗೆ ಮಾತ್ರ ಸಾಹುಕಾರರಾಗಿರದೆ ನಿಜವಾಗಿ ಸಾಹುಕಾರರಾಗಿದ್ದುದಕ್ಕೆ ಹಜಾರವೇ ದೃಷ್ಟಾಂತವಾಗಿತ್ತು.

ಸೊಗಸಾದ ಟ್ಯೂಬ್ ಫರ್ನೀಚರಿನಿಂದ ಹಜಾರ ಅಲಂಕೃತವಾಗಿತ್ತು. ಗೋಡೆಯ ಮಗ್ಗುಲಿಗೆ ಒಂದು ಗಾಜಿನ ಆಲ್ಮೇರಾ- ಅದರ ತುಂಬ ಬೇರೆ ಬೇರೆ ಊರುಗಳಲ್ಲಿ ಸಾಹುಕಾರರಿಗೆ ಬಂದಿದ್ದ ಬೆಳ್ಳಿಯ, ಗಂಧದ ಮರದ ಕರಂಡಗಳು. ಗೋಡೆಯ ಒಂದೆಡೆ ಸಾಹುಕಾರರ ಪುರುಷ ಪ್ರಮಾಣದ ತೈಲಚಿತ್ರ; ಮಿಕ್ಕ ಗೋಡೆಗಳ ಮೇಲೆಲ್ಲಾ ಸಾಹುಕಾರರು ಭಾಗವಹಿಸಿದ್ದ ಸಮಾರಂಭಗಳ ಚಿತ್ರಗಳು. ಸಾಹುಕಾರರ ತೈಲಚಿತ್ರಕ್ಕೆದುರಾಗಿ, ಅವರು ಜವಾಹರಲಾಲ್ ನೆಹ್ರೂ ಅವರ ಕೈಕುಲುಕುತ್ತಿರುವ ಭಾವಚಿತ್ರ. ಒಂದು ಮೂಲೆಯಲ್ಲಿ ಅತ್ಯಾಧುನಿಕ ರೀತಿಯ ರೇಡಿಯೋಗ್ರಾಮ್, ಹಜಾರದ ನೆಲಕ್ಕೆ ಹಾಸಿದ್ದುದು ಪರ್ಶಿಯಾ ರತ್ನಗಂಬಳಿ.

ಹೊರಗಿನಿಂದ ಬಂದ ಲೋಕಾಭಿರಾಮ,

"ಯಾರೋ ಇಬ್ಬರು ಮಂತ್ರಿಗಳು ಬಂದು ಕುಕ್ಕರಿಸಿದ್ದಾರಮ್ಮಾ- ಅವರನ್ನು ಸಾಗಿಸಿ ಬರ್ತೀನಿ ಅಂದ್ರು."

"ಬರಲಿ- ಪರವಾಗಿಲ್ಲ."

"ಮನೆ ನೋಡಿದಿರಾ ?"

"ಇಲ್ಲ."

ಲೋಕಾಭಿರಾಮ ಅವಳನ್ನು ಕರೆದೊಯ್ದು ಅಂಗಳ, ಅಂಗಳದ ಸುತ್ತಲೂ ಇದ್ದ ಕೋಣೆಗಳು ತೋರಿಸಿಕೊಂಡು ಒಳಗೆ ಕರೆದುಕೊಂಡು ಬಂದು ಸಾಹುಕಾರರ 'ಶಯ್ಯಾಗೃಹ' ತೋರಿಸಿದ.

ನಾಲ್ಕಾಳಿಗೆ ಸಾಲುವಂತಹ ವಿಶಾಲವಾದ ಕರೀಮರದ ಮಂಚ. ಅದರ ಮೇಲೆ ಸ್ಪ್ರಿಂಗ್ ಮ್ಯಾಟ್ರೆಸ್‌ಗಳು (Spring mattresses) ಅದರ ಮೇಲೆ ಸ್ಯಾಟಿನ ಬೆಡ್ ಕವರ್‌ಗಳು (Bed cover) ಬಿನ್ನಿಯ ರಾಜ ಪ್ರಮುಖ್ ರಗ್ಗುಗಳು. ಮಂಚದೆದುರಿಗೆ ಸೋಫಾಸೆಟ್ ಅದರ ಮುಂದೆ ಒಂದು ಟೀಪಾಯ್. ಮಂಚದ ಸುತ್ತಲೂ ಗೋಡೆಯೇ ಕಾಣದಂತೆ ನಿಲುಗನ್ನಡಿಗಳು.

ಶಯ್ಯಾಗೃಹದ ಎದುರಿಗಿದ್ದ ಡ್ರೆಸ್ಸಿಂಗ್ ರೂಮಿನಲ್ಲಿ ನಾಲ್ಕು ಸ್ಟೀಲ್ ಅಲ್ಮೀರಾಗಳು, ಡ್ರೆಸ್ಸಿಂಗ್ ಟೇಬಲ್, ಬಟ್ಟೆಯ ಸ್ಟ್ಯಾಂಡುಗಳಿದ್ದವು.

ಮೋಹಿನಿಯ ಮನಸ್ಸಿನ ಮೇಲೆ ಆಗಿದ್ದ ಪರಿಣಾಮವನ್ನೇ ಸೂಕ್ಷ್ಮವಾಗಿ ಲೋಕಾಭಿರಾಮ ನೋಡುತ್ತಾ ಅವಳನ್ನು ಹಜಾರಕ್ಕೆ ಕರೆತಂದು ಕೂಡಿಸಿ,

"ಸಾಹುಕಾರರ ಅಭಿರುಚಿ ನೋಡಿದಿರಾ?" ಎಂದ.

"ಅವರು ಇಷ್ಟು ದೊಡ್ಡ ಶ್ರೀಮಂತರೆಂದು ನಾನು ಭಾವಿಸಿರಲಿಲ್ಲ ಲೋಕಾಭಿರಾಮಯ್ಯ."

"ತಮಗೆ ಆಸ್ತಿಯೆಷ್ಟಿದೆಯೆನ್ನುವುದು ಅವರಿಗೇ ಗೊತ್ತಿಲ್ಲ ಮೋಹಿನಿದೇವಿ."

"ಸಾಹುಕಾರರಿಗೆ ಸಂಸಾರ ಇಲ್ಲವೇ ?"

"ಇದ್ದಾರೆ- ಶಿವಮೊಗ್ಗೆಯಲ್ಲಿ. ಈ ಊರು, ಮೈಸೂರು, ನೀಲಗಿರಿ, ಶಿವಮೊಗ್ಗೆಯಲ್ಲಿ ಸಾಹುಕಾರರಿಗೆ ಬಂಗಲೆಗಳಿವೆ. ಎಲ್ಲ ಬಂಗಲೆಗಳಲ್ಲೂ ಆಳು ಕಾಳುಗಳು, ಅಡಿಗೆಯವರು, ಡ್ರೈವರು ಇರುತ್ತಾರೆ."

"ಸಾಹುಕಾರರು ಹೆಚ್ಚಾಗಿ ಇರುವುದೆಲ್ಲಿ?"

"ಈ ಊರಿನಲ್ಲೆ !"

"ಅವರ ಊರು ಶಿವಮೊಗ್ಗ ಎಂದಿರಿ ?"

"ಹೌದಮ್ಮ . ಇದು ರಾಜಧಾನಿ ರಾಜಕೀಯ ಸಂಧಾನುಸಂಧಾನುಗಳೆಲ್ಲಾ ನಡೆಯುವುದು ಇಲ್ಲೇ- ದಿಲ್‌ರುಬಾ ಬಂಗಲೆಯಲ್ಲಿ ! ಇಂಗ್ಲೆಂಡಿಗೆ ಹೇಗೆ ೧೦. ಡೌನಿಂಗ್ ಸ್ಟ್ರೀಟೋ (No. 10, Downing Street) ಹಾಗೆ ಮೈಸೂರಿಗೆ ದಿಲ್‌ರುಬಾ ಬಂಗಲೆ."

"ಇಷ್ಟು ಪ್ರಬಲರಾಗಿರುವ ಸಾಹುಕಾರರೇಕೆ ಮಂತ್ರಿಗಳಾಗಲಿಲ್ಲ ಲೋಕಾಭಿರಾಮಯ್ಯ?"

"ಮುಂತ್ರಿಯಾಗೋದು ಅವರಿಗೆ ಜುಜಿಬಿ ವಿಷಯ ಕಣ್ರಮ್ಮಾ- ಮಂತ್ರಿಗಳನ್ನು ಮಾಡುವವರು ಇವರು- ಉರುಳಿಸುವವರು ಇವರು- ಇವರೇ ಮಂತ್ರಿಗಳಾದರೆ ಕೈಕಟ್ಟಿಹೋಗುತ್ತದಮ್ಮ"

"ನಿಜ ನಿಜ."

ಲೋಕಾಭಿರಾಮ ಮೇಲಕ್ಕೆದ್ದು

"ಬಂದಿದ್ದವರು ಹೊರಟಿರಬಹುದು- ಒಂದು ಬಾರಿ ನೋಡಿಕೊಂಡು ಬರುತ್ತೇನೆ."

ಎಂದು ಹೊರಗೆ ಹೋದ.

ಮೂರು ನಾಲ್ಕು ನಿಮಿಷಗಳಾನಂತರ ಲೋಕಾಭಿರಾಮನೊಂದಿಗೆ ಒಳಗೆ ಬಂದ ಸಾಹುಕಾರರು,

"ನಿನ್ನ ಕಾಯಿಸಿದೆ ಮೋಹಿನಿ. ಕ್ಷಮಿಸು,"

ಎಂದು ಹೇಳಿ ಅವಳ ಸಮೀಪದಲ್ಲಿದ್ದ ಸೋಫಾ ಕುರ್ಚಿಯ ಮೇಲೆ ಕುಳಿತು,

"ನೀನು ಬಂದದ್ದು ಬಹಳ ಸಂತೋಷ."

ಎಂದು ಲೋಕಾಭಿರಾಮನ ಕಡೆ ತಿರುಗಿ,

"ಕಾಫಿ, ತಿಂಡಿ ತರಿಸಿಕೊಡು ಲೋಕಾಭಿ," ಎಂದರು.

"ಕಬ್ಬನ್‌ಪಾರ್ಕ್ ರೆಸ್ಟುರಾದಲಿ ಇಬ್ಬರೂ ಉಪಾಹಾರ ಮುಗಿಸಿಕೊಂಡು ಬಂದೆವು ಸ್ವಾಮಿ."

"ಮೋಹಿನಿ- ಈ ತಿಂಗಳು ೧೬ ನೆಯ ತಾರೀಖು ರಾಷ್ಟ್ರಪತಿಗಳು ಇಲ್ಲಿಗೆ ದಯಮಾಡಿಸುತ್ತಾರೆ- ಈ ವಿಷಯ ನೀನು ಪತ್ರಿಕೆಗಳಲ್ಲಿ ಓದಿರಬಹುದು."

"ಓದಿದ್ದೇನೆ."

“ಅವರಿಗೆ ನಾವು ಏರ್ಪಡಿಸಲಿರುವ ಸತ್ಕಾರಕೂಟದಲ್ಲಿ ನಿನ್ನ ನಾಟ್ಯಪ್ರದರ್ಶನವಾಗಬೇಕೆಂದು ನನ್ನ ಅಪೇಕ್ಷೆ.”

ಮೋಹಿನಿ ತನ್ನ ಕಿವಿಯನ್ನೇ ತಾನು ನಂಬದಾದಳು,

ತನ್ನ ಅದೃಷ್ಟದ ಬಾಗಿಲು ತೆಗೆಯಿತೆಂದು ಭಾವಿಸಿದ ಮೋಹಿನಿ ಹರ್ಷ ಚಿತ್ತಳಾಗಿ,

“ನನಗೆ ಅವಕಾಶ ಸಿಕ್ಕುವುದೇ?”

“ಏಕೆ ಹಾಗೆ ಕೇಳುವೆ?”

“ನಾನಿನ್ನೂ ಹೊಸಬಳು. ಈ ರಂಗದಲ್ಲಿ ಅರಿತ ನುರಿತ ಕಲಾವಿದರು ಬೆಂಗಳೂರಿನಲ್ಲಿದ್ದಾರೆ.”

“ಯಾರಿದ್ದರೇನು? ನಿನ್ನ ಪ್ರದರ್ಶನ ಏರ್ಪಡಿಸುವ ಜವಾಬ್ದಾರಿ ನನಗಿರಲಿ ”

“ನಿಮ್ಮದು ಬಹಳ ದೊಡ್ಡ ಉಪಕಾರ........”

ಎಂದವಳು ಹೇಳುತ್ತಿದ್ದಂತೆ ಟೆಲಿಫೋನ್ ಒಂದೇ ಸಮನಾಗಿ ಗಂಟೆ ಬಾರಿಸಿತು.

“ನೋಡು ಲೋಕಾಭಿ- ಯಾರದು ?”

ಎಂದು ಹೇಳಿದ ಸಾಹುಕಾರರು ಮೋಹಿನಿಯ ಕಡೆ ತಿರುಗಿ,

“ಹಗಲೂ ರಾತ್ರಿ ನನಗಿದೇ ಕಾಟ ಮೋಹಿನಿ. ಒಂದು ಗಳಿಗೆ ವಿಶ್ರಾಂತಿ ಪಡೆಯಲೂ ಅವಕಾಶವಿಲ್ಲ.”

ಹೊರಗೆ ಹೋಗಿ ಧಾವಿಸಿ ಒಳಗೆ ಬಂದ ಲೋಕಾಭಿರಾಮ ಗಾಬರಿ ಗಾಬರಿಯಾಗಿ,

“ಚೀಫ್ ಸೆಕ್ರೆಟರಿ ಸಾಹೇಬರು ಸ್ವಾಮಿ” ಎಂದ.

“ಯಾಕೋ ಇಷ್ಟು ಗಾಬರಿಯಾಗ್ತೀ - ಚೀಫ್ ಸೆಕ್ರೆಟರಿ ಆದರೆ ಏನಂತೆ - ಇನ್ನೊಂದು ಗಂಟೆ ಬಿಟ್ಟು ಫೋನ್ ಮಾಡಿ ಎಂದು ಹೇಳು ಲೋಕಾಭಿ”

ಎಂದವರು ಥಟ್ಟನೆ,

“ಬೇಡ. ತಡೀ”

ಎಂದೆದ್ದು ಹೋದರು.

ಸಾಹುಕಾರರು ಒಳಗೆ ಬರಲು ಹತ್ತು ನಿಮಿಷಗಳಾದವು.

ಅವರು ಪ್ರಸನ್ನಚಿತ್ತರಾಗಿ,

"ಹದಿನಾರಕ್ಕೆ ನಿನ್ನ ಪ್ರೋಗ್ರಾಂ ಗೊತ್ತುಮಾಡಿದ್ದೇನೆ ಮೋಹಿನಿ. ನಾಳೆಯೇ ನಿನಗೆ ಚೀಫ್ ಸೆಕ್ರೆಟರಿಯವರಿಂದ ಆಹ್ವಾನ ಬರುತ್ತದೆ."

ಮೋಹಿನಿಯ ಆನಂದಕ್ಕೆ ಮೇರೆಯೇ ಇಲ್ಲವಾಯಿತು.

"ನಿಮ್ಮ ಉಪಕಾರಕ್ಕೆ ನಾನು ಚಿರಋಣಿ"

"ಇರಲಿ. ಇರಲಿ- ನನ್ನ ಉಪಕಾರ ಇಲ್ಲಿಗೇ ಮುಗಿಯುವುದಿಲ್ಲ"

ಎಂದು ಹೇಳಿ ಮೇಲಕ್ಕೆದ್ದ ಸಾಹುಕಾರರು,

"ಲೋಕಾಭಿ ಮೋಹಿನಿಯನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಬಿಟ್ಟು ಬಾ." ಎಂದರು.

ಲೋಕಾಭಿರಾಮ ಬೆಕ್ಕಸಬೆರಗಾಗಿ ಸಾಹುಕಾರರನ್ನು ಒಂದು ಕ್ಷಣ ನೋಡಿ, ಮೋಹಿನಿಯೊಂದಿಗೆ ಹೊರಟ.

ಹದಿನೈದು ಇಪ್ಪತ್ತು ನಿಮಿಷಗಳ ತರುವಾಯ ಹಿಂದಿರುಗಿದ ಲೋಕಾಭಿ,

"ಯಾಕೆ ಸ್ವಾಮಿ. ಹೀಗೆ ಮಾಡಿದಿರಿ ?" ಎಂದು ಕೇಳಿದ.

"ಹೇಗೆ ಮಾಡಿದೆ ?"

"ಕೈಗೆ ಸಿಕ್ಕಿದ ಹಕ್ಕಿಯನ್ನು….."

"ಅವಸರಪಡಬಾರದು ಕಣೋ ದಡ್ಡ. ಹದಿನಾರು ಕಳೆದುಹೋಗಲಿ ಸುಮ್ಮನಿರು."

"ನಿಮ್ಮ ಲೆಕ್ಕಾಚಾರವೇ ನನಗೆ ಅರ್ಥವಾಗಲ್ಲ ಸ್ವಾಮಿ."

"ನನ್ನ ಲೆಕ್ಕಾಚಾರ ನಿನಗೇಕೆ. ಯಾರಿಗೂ ಅರ್ಥವಾಗಲ್ಲ- ಈಗ ಯಾರಾದರೂ ಸಿಕ್ಕುತ್ತಾರೇನೋ ?"

"ಇಷ್ಟು ಹೊತ್ತಿನಲ್ಲಿ ಯಾರು ಸಿಕ್ಕುತ್ತಾರೆ ಸ್ವಾಮಿ,"

"ನೋಡು ಪಂಕಜ ಬರುತ್ತಾಳೇನೋ ?"

"ಅವಳು ಬಂದರೂ ಪ್ರಯೋಜನವಿಲ್ಲ - ಎಂಟು ಗಂಟೆಗೆ ಹೊರಟುಬಿಡುತ್ತಾಳೆ."

"ಸಬೂಬು ಹೇಳಬೇಡ. ಯಾವದಾದರೂ ನೋಡೋ - ಕಾರು ತೆಗೆದುಕೊಂಡು ಹೋಗು - ಹಾಗೇ ವಿಸ್ಕಿ ಶೀಷೆ, ಗ್ಲಾಸು, ಸೋಡಾ ಇಲ್ಲಿಟ್ಟು ಹೋಗು"

ಲೋಕಾಭಿ ವಿಸ್ಕಿ ಶೀಷೆ, ಗ್ಲಾಸು, ಸೋಡಾ ಶೀಷೆ ತಂದು ಸಾಹುಕಾರ ಬಳಿಗೊಂದು ಟೀಪಾಯ್ ಎಳೆದು ಅದರ ಮೇಲಿಟ್ಟು ಹೊರಗೆ ಹೋದ.

ರಾಷ್ಟ್ರಪತಿಗಳ ಸ್ವಾಗತಕ್ಕೆ ವಿಶೇಷ ಸಿದ್ಧತೆಯಾಗತೊಡಗಿತು. ರಾಷ್ಟ್ರಪತಿಗಳ ಮೆರವಣಿಗೆ ಬರುವ ಮುಖ್ಯ ರಸ್ತೆಗಳು ಶುಚಿಗೊಂಡು, ತಳಿರುತೋರಣಗಳಿಂದ ಅಲಂಕೃತವಾದವು. ಬಡಬಗ್ಗರ ಕೇರಿಗಳು, ಹೊಲಸು ಕೂಪಗಳು ಮಾನ್ಯ ಅತಿಥಿಗಳ ಕಣ್ಣಿಗೆ ಬೀಳದಂತೆ ಅವಕುಂಠನವೆಳೆಯಲಾಯಿತು.

ಏರಿಯೋಡ್ರೋಮಿನಲ್ಲಿ ಪರಿವಾರದೊಂದಿಗಿಳಿದ ರಾಷ್ಟ್ರಪತಿಗಳನ್ನು ಮುಖ್ಯ ಮಂತ್ರಿಗಳು, ಮಂತ್ರಿ ಮಂಡಳ, ಮೇಯರು, ಕಾಂಗ್ರೆಸ್ ಅಧ್ಯಕ್ಷರು, ಸಾಹುಕಾರ ಹೊನ್ನಪ್ಪನವರು ಇತರ ಮಾನ್ಯ ಸದ್ಗೃಹಸ್ತಸ್ಥರು ಸ್ವಾಗತಿಸಿದರು.

ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಟು, ಲಕ್ಷೋಪಲಕ್ಷಕ್ಕೆ ದರ್ಶನಭಾಗ್ಯವಿತ್ತು ರಾಷ್ಟ್ರಪತಿಗಳು ಅರಮನೆ ತಲುಪಿದರು.

ಮಧ್ಯಾ ಭೋಜನಾನಂತರ ರಾಷ್ಟ್ರಪತಿಗಳಿಗೆ ಬಿಡುವಿಲ್ಲದಂತೆ ಕಾರ್ಯಕ್ರಮಗಳು ವ್ಯವಸ್ಥಿತವಾಗಿದ್ದವು. ಹಿಂದೂಸ್ಥಾನ್ ಏರ್‌ಕ್ರ್ಯಾಫ್ಟ್ ಫ್ಯಾಕ್ಟರಿ, ಮೆಷೀನ್ ಟೂಲ್ ಫ್ಯಾಕ್ಟರಿ, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಸಂಸ್ಥೆಗಳಿಗೆ ಭೇಟಿಯಿತ್ತು ರಾಷ್ಟ್ರಪತಿಗಳು ಸಂಜೆ ಐದಕ್ಕೆ ರೆಸಿಡೆನ್ಸಿ ಬಂಗಲೆ ತಲುಪಿದರು.

ರೆಸಿಡೆನ್ಸಿಯ ಕೈದೋಟದಲ್ಲಿ ಅತಿಥಿ ಅಭ್ಯಾಗತರಿಗೆ ಉಪಾಹಾರ ವ್ಯವಸ್ಥೆಯಾಗಿತ್ತು. ಗುಂಪು ಗುಂಪಾಗಿ ನಿಂತಿದ್ದ ಜನಗಳ ಬಳಿಗೆ ಬಂದು, ರಾಷ್ಟ್ರಪತಿಗಳು ಎಲ್ಲರನ್ನೂ ವಿಶ್ವಾಸಪೂರ್ವಕವಾಗಿ ಮಾತನಾಡಿಸಿದರು. ರಾಷ್ಟ್ರಪತಿಗಳ ಜತೆಯಲ್ಲಿದ್ದ ಸಾಹುಕಾರ ಹೊನ್ನಪ್ಪನವರು ಅವರಿಗೆ ಕೆಲವು ಮುಖ್ಯಸ್ಥರ ಪರಿಚಯ ಮಾಡಿಕೊಟ್ಟರು.

ಉಪಾಹಾರಾನಂತರ ಸಮಸ್ತರೂ ರೆಸಿಡೆನ್ಸಿಯ ಸಭಾಭವನಕ್ಕೆ ಬಂದು ಕುಳಿತರು.

ಮೈಸೂರಿನ ಪ್ರಖ್ಯಾತ ಪಿಟೀಲ್ ವಾದ್ಯನಿಪುಣರಾದ ಗೌರಯ್ಯನವರು, ವೈಣಿಕ ಪ್ರವೀಣ ರಂಗಸ್ವಾಮಿ ಅಯ್ಯಂಗಾರ್ಯರ ವಾದ್ಯಮೇಳ ಆರಂಭವಾಯಿತು.

ವಾದ್ಯಮೇಳ ಮುಗಿದ ಮೇಲೆ ನಾಟ್ಯಾಚಾರ್ಯ ಶಂಕರ ಮತ್ತು ವಾದ್ಯಗೋಷ್ಠಿಯವರು ರಂಗದ ಮೇಲೆ ಬಂದು ಕುಳಿತರು.

ಮೋಹಿನಿ ಪ್ರವೇಶಿಸಿ 'ಅಲರಿಪು' ಪ್ರದರ್ಶಿಸಿದಳು.

ತರುವಾಯ ಶರಾವತಿ ಮತ್ತು ಮೋಹಿನಿಯ 'ಸ್ವರಜತಿ' ಪ್ರದರ್ಶನವಾಯಿತು.

ಎರಡು ಪದಗಳು, ಒಂದು ತಿಲ್ಲಾಣ ಮುಗಿದ ಮೇಲೆ ಮೋಹಿನಿ, ಶರಾವತಿ ಇಬ್ಬರೂ 'ಮೋಹಿನಿ ಭಸ್ಮಾಸುರ' ವಸ್ತುವನ್ನು ವಿಸ್ತಾರವಾಗಿ ಅಭಿನಯಿಸಿ ಅಂದಿನ ಪ್ರದರ್ಶನ ಮುಕ್ತಾಯಗೊಳಿಸಿದರು.

ಹೊನ್ನಪ್ಪನವರು ರಾಷ್ಟ್ರಪತಿಗಳನ್ನು ವೇದಿಕೆಗೆ ಕರೆತಂದು ಕಲಾವಿದರ ಪರಿಚಯ ಮಾಡಿಕೊಟ್ಟರು, ಪ್ರೆಸ್ ಪೋಟೋಗ್ರಾಫರರ ಫ್ಲ್ಯಾಷ್ ಬಲ್ಬುಗಳು (Flash Bulbs) ಚಟಚಟ ಎಂದವು.

ರಾಷ್ಟ್ರಪತಿಗಳನ್ನು ಬೀಳ್ಕೊಟ್ಟು ನೇಪಥ್ಯಕ್ಕೆ ಬಂದ ಸಾಹುಕಾರರು, ಮೋಹಿನಿ ಇದ್ದಲ್ಲಿಗೆ ಹೋಗಿ,

"ನಿನ್ನ ಪ್ರದರ್ಶನ ಸೊಗಸಾಗಿತ್ತು ಮೋಹಿನಿ. ರಾಷ್ಟ್ರಪತಿಗಳು ತುಂಬ ಸಂತೋಷಪಟ್ಟುಕೊಂಡರು."

"ಎಲ್ಲಾ ನಿಮ್ಮ ದಯೆ."

"ಚೀಫ್ ಸೆಕ್ರೆಟರಿಗಳಿಗೆ ಹೇಳಿದ್ದೇನೆ, ಅವರು ಚೆಕ್ ತಂದು ಕೊಡುತ್ತಾರೆ, ತೆಗೆದುಕೋ."

"ಆಗಲಿ."

"ನಾಡಿದ್ದು ಸೋಮವಾರ ಬೆಳಿಗ್ಗೆ ರಾಷ್ಟ್ರಪತಿಗಳು ಡೆಲ್ಲಿಗೆ ಪ್ರಯಾಣಬೆಳಸುತ್ತಾರೆ. ಅಲ್ಲಿಯವರೆಗೆ ನನಗೆ ಸ್ವಲ್ಪವೂ ಬಿಡುವಿಲ್ಲ."

"................"

"ನಾಡಿದ್ದು ಹನ್ನೊಂದು ಗಂಟೆಗೆ ನಾನು ಲೋಕಾಭಿಯನ್ನು ನಿಮ್ಮ ಮನೆಗೆ ಕಳಿಸಿಕೊಡುತ್ತೇನೆ. ಅವನೊಂದಿಗೆ ಬಾ."

"ಎಲ್ಲಿಗೆ ?"

"ನಮ್ಮ ಮನೆಗೆ."

"ನನಗೆ ಕಾಲೇಜಿದೆಯಲ್ಲಾ !"

"ಒಂದು ದಿನ ಕಾಲೇಜಿಗೆ ಹೋಗದಿದ್ದರೇನು?— ಬರುವುದಕ್ಕೆ ಆಗುತ್ತದೋ ಆಗುವುದಿಲ್ಲವೋ ?"

"ಆಗುತ್ತದೆ— ಲೋಕಾಭಿರಾಮಯ್ಯ ಬರುವುದು ಬೇಡ. ನಾನೇ ಬರುತ್ತೇನೆ."

“ಮನೆಯ ಗುರುತು ಸಿಕ್ಕುತ್ತದಷ್ಟೆ!”

“ಸಿಕ್ಕುತ್ತದೆ.”

“ಬರುವುದಕ್ಕೆ ಮೊದಲು ಒಂದು ಸಲ ಫೋನ್ ಮಾಡು.”

“ನಿಮ್ಮ ನಂಬರು.”

ಹೊನ್ನಪ್ಪನವರು ತಮ್ಮ ಫೋನ್ ನಂಬರ್ ತಿಳಿಸಿ,

“ಊಟ ನಮ್ಮ ಮನೆಯಲ್ಲೇ ಮಾಡುವೆಯಂತೆ”

ಎಂದು ಹೇಳಿ ಹೊರಗೆ ಹೋದರು.

ತನ್ನ ಅದೃಷ್ಟಚಕ್ರದ ದುರಿತಗತಿ ಕಂಡು ಮೋಹಿನಿಗೇ ಪರಮಾಶ್ಚರ್ಯವಾಯಿತು.

ಯಥಾಕ್ರಮದಂತೆ ಸೋಮವಾರ ಮೋಹಿನಿ, ಹತ್ತು ಗಂಟೆಗೇ ಸ್ನಾನ ಮುಗಿಸಿ, ಅಲಂಕರಿಸಿಕೊಂಡು ಕಾಲೇಜಿಗೆ ಹೊರಡಲು ಸಿದ್ಧಳಾದಳು.

ಅಂಬುಜಮ್ಮ ಬಂದು,

“ಊಟ ಮಾಡುವುದಿಲ್ಲವೇ ಮೋಹಿ” ಎಂದು ಕೇಳಿದರು.

“ಇವತ್ತು ಎರಡೇ ಪೀರಿಯಡ್ (Period) ಇದೆಯಮ್ಮ - ಮುಗಿಸಿಕೊಂಡು ಬಂದು ಊಟಮಾಡುತ್ತೇನೆ, ಬೆಳಿಗ್ಗೆ ತಿಂಡಿ ತಿಂದಿದ್ದೇನೆ- ಹಸಿವಿಲ್ಲ” ಎಂದಳು

ಮನೆಬಿಟ್ಟು ಹೊರಟ ಮೋಹಿನಿ ನೇರವಾಗಿ ಪೋಸ್ಟ್ ಆಫೀಸಿಗೆ ಬಂದು ’ಪಬ್ಲಿಕ್ ಕಾಲ್ ಬೂತ್’ನಲ್ಲಿ (Public call booth) ಹೊನ್ನಪ್ಪನವರ ನಂಬರಿಗೆ ಡಯಲ್ ಮಾಡಿದಳು. ಅತ್ತಕಡೆಯಿಂದ,

’ಹಲೋ. ಯಾರು?’

ಎಂದು ಧ್ವನಿ ಬಂದಿತು.

’ಸಾಹುಕಾರರು ಬೇಕಾಗಿತ್ತು.’

’ನೀವು ಯಾರು ?’

’ನೀವು ಯಾರು?’

ಎಂದು ಮರುಪ್ರಶ್ನೆ ಮಾಡಿದಳು.

’ನಾನು ಲೋಕಾಭಿರಾಮ- ಮೋಹಿನಿದೇವಿಯವರೇ ಫೋನ್ ಮಾಡುತ್ತಿರುವುದು’

’ಹೌದು ಲೋಕಾಭಿರಾಮ್.’

'ಬೇಗ ಬನ್ನಿಯಮ್ಮ- ಸಾಹುಕಾರರು ಕಾಯುತ್ತಿದ್ದಾರೆ.'

'ಸಾಹುಕಾರರೇನು ಮಾಡುತ್ತಿದ್ದಾರೆ.'

'ಸ್ನಾನ ಮಾಡುತ್ತಿದ್ದಾರೆ. ಇಷ್ಟು ಹೊತ್ತೂ ಫೋನಿನ ಮುಂದೆ ಅವರೇ ಕುಳಿತಿದ್ದರು. ನೀವು ಎಲ್ಲದ್ದೀರಿ ?'

'ಪೋಸ್ಟ್ ಆಫೀಸಿನಲ್ಲಿದ್ದೇನೆ.'

'ಬೇಗ ಬಂದುಬಿಡಿ.'

'ಬರುತ್ತೇನೆ'

ಎಂದು ಹೇಳಿ ರಿಸೀವರ್ (receiver) ಕೆಳಗಿಟ್ಟಳು.

ಲೋಕಾಭಿರಾಮ ಹೊರಬಾಗಿಲಿನಲ್ಲೇ ಕಾದಿದ್ದು ಅವಳನ್ನು ಒಳಕ್ಕೆ ಕರೆದೊಯ್ದು ಕುಳ್ಳಿರಿಸಿದ.

ಶುಭ್ರಸ್ನಾತರಾಗಿದ್ದ ಸಾಹುಕಾರರು, ಮಡಿ ವಸ್ತ್ರಗಳನ್ನು ಧರಿಸಿ ಹೊರಗೆ ಬಂದು ಕುಳಿತು,

"ನಾನು ಸ್ನಾನಕ್ಕೆ ಹೋಗಿದ್ದೆ. ಅದಕ್ಕೇ ಲೋಕಾಭಿಯನ್ನು ಫೋನ್ ಬಳಿ ಕೂಡಿಸಿದ್ದೆ."

"ಲೋಕಾಭಿರಾಮಯ್ಯ ಹೇಳಿದರು."

"ಚೆಕ್ ಕೊಟ್ಟರೇ?"

"ಕೊಟ್ಟರು."

"ಹಣ ಸಾಕೇ ?"

"ಸಾಲದೆ ಏನು— ನನಗಾಗಿರುವುದೆಲ್ಲಾ ಐದು ನೂರೇ ಖರ್ಚು. ಹೀಗೆ ಒಂದೊಂದು ಪ್ರದರ್ಶನಕ್ಕೆ ನನಗೆ ಐದು ನೂರು ಸಿಕ್ಕಿದರೆ ನಾನೂ ಸಾಹುಕಾರಳಾಗುತ್ತೇನೆ."

"ನಿನ್ನನ್ನು ಸಾಹುಕಾರಳನ್ನಾಗಿ ಮಾಡಬೇಕೆಂಬುದೇ ನನ್ನ ಆಶಯ."

"………………."

"ನಿನ್ನ ಪ್ರದರ್ಶನಕ್ಕೆ ಸರ್ಕಾರ ಸಂಭಾವನೆ ಕೊಟ್ಟಿತು. ನಾನು ಏನೂ ಕೊಡಲಿಲ್ಲವಲ್ಲಾ ಮೋಹಿನಿ."

"ನೀವು ಆಸಕ್ತಿ ವಹಿಸದಿದ್ದರೆ ಸರ್ಕಾರ ನನ್ನ ಪ್ರದರ್ಶನ ಏರ್ಪಡಿಸುತ್ತಿತ್ತೇ."

"ಇದು ಸಾಲದು ಮೋಹಿನಿ- ನಾನೂ ನಿನಗೆ ಒಂದು ಸಣ್ಣ ಉಡುಗೊರೆ ಕೊಡಬೇಕೆಂದಿದ್ದೇನೆ."

ಎಂದು ಲೋಕಾಭಿರಾಮನನ್ನು ಕರೆದು,

"ನಾನು ಫೋನ್ ಮಾಡಿ ಬರುತ್ತೇನೆ ಲೋಕಾಭಿ. ಮೋಹಿನಿಯೊಂದಿಗೆ ನೀನು ಮಾತಾಡುತ್ತಿರು"

ಎಂದು ಹೇಳಿ ಹೊರಗೆ ಹೋದರು.

ಲೋಕಾಭಿರಾಮ ಒಳಗೆದ್ದು ಹೋಗಿ ಒಂದು ಬೆಳ್ಳಿ ಯ ತಟ್ಟೆಯಲ್ಲಿ ಪ್ಯಾಕೆಟ್ ಒಂದನ್ನುಟ್ಟು ತಂದು ಮೋಹಿನಿಯ ಮುಂದೆ ಹಿಡಿದ.

"ಇದೇನು ಲೋಕಾಭಿರಾಮ್."

"ಸಾಹುಕಾರರ ಉಡುಗೊರೆ ಕಣ್ರಮ್ಮ- ತೆಗೆದುಕೊಳ್ಳಿ"

ಮೋಹಿನಿ ಪ್ಯಾಕೆಟ್ಟನ್ನು ಕೈಗೆತ್ತಿಕೊಂಡು ಒಡೆದು ನೋಡಿದಳು. ಸೊಗಸಾದ ಜರೀ ಕೆಲಸ ಮಾಡಿದ ರೇಷ್ಮೆ ಹಸಿರು ಸೀರೆ. ಅದರ ಜತೆಯಲ್ಲಿ ಹಸಿರು ಮುಖಮಲ್ಲಿನ ಬ್ಲೌಸ್ ಪೀಸ್.

"ಉಡುಗೊರೆ ಭಾರಿಯಾಯಿತು ಲೋಕಾಭಿರಾಮ್."

"ಸಾಹುಕಾರರಿಗೆ ಇದೆಲ್ಲಾ ಜುಜಿಬಿ ಕಣ್ರಮ್ಮಾ."

ಮೋಹಿನಿ ಹುಬ್ಬುಗಳನ್ನು ಮೇಲಕ್ಕೆತ್ತಿ ಆಶ್ಚರ್ಯ ವ್ಯಕ್ತಮಾಡಿದಳು,

"ನಿಮ್ಮ... ನಿಮ್ಮ ಕಲೆಯ ಮೇಲೆ ಅವರಿಗೆ ತುಂಬ ಪ್ರೀತಿ ಹುಟ್ಟಿದೆ. "

"................"

"ನೀವು... ಅವರ ವಿಶ್ವಾಸ ಉಳಿಸಿಕೊಳ್ಳಬೇಕು."

"ಅವರ ವಿಶ್ವಾಸ ಕಳೆದುಕೊಳ್ಳುವ ಯಾವ ಕೆಲಸವನ್ನೂ ನಾನು ಮಾಡುವುದಿಲ್ಲ ಲೋಕಾಭಿರಾಮ್".

"ನನಗೂ ಹಾಗೇ ಅನಿಸುತ್ತದೆ. ನಾನು ಹೇಳಿದ ಹಾಗೆ ನೀವು ಕೇಳಿಯಮ್ಮ. ಸಾಹುಕಾರರ ಸಹಾಯದಿಂದ ನಿಮ್ಮನ್ನು ಗೌರಿಶಂಕರದ ಮೇಲೆ ಕೂಡಿಸದಿದ್ದರೆ ನನ್ನನ್ನು 'ಕುರೋ-ಕುರೊ' ಎಂದು ಕರೆದುಬಿಡಿ."

ಅವನ ವಾಗ್ಝರಿ ಕಂಡು ನಸುನಗುತ್ತಾ ಮೋಹಿನಿ,

"ಹಾಗೇ ಆಗಲಿ ಲೋಕಾಭಿರಾಮ್" ಎಂದಳು.

ಅವಳ ಪ್ರಸನ್ನವದನ ಕಂಡು ಧೈರ್ಯಗೊಂಡ ಲೋಕಾಭಿರಾಮ,

“ಸಾಹುಕಾರರು ಕೊಟ್ಟಿರುವ ಸೀರೆ ಉಟ್ಟುಕೊಂಡು ಅವರಿಗೆ ತೋರಿಸಿಯಮ್ಮ. ಸಂತೋಷಪಡುತ್ತಾರೆ.”

“ಇಲ್ಲೇ...”

“ರೂಮಿಗೆ ಹೋಗಿ” ಎಂದ

ಮೋಹಿನಿ ಕ್ಷಣಕಾಲ ಯೋಚಿಸಿ, ಪ್ಯಾಕೆಟ್ ಕೈಗೆ ತೆಗೆದುಕೊಂಡು ರೂಮಿನೊಳಗೆ ಹೋದಳು.

ತಾನು ಧರಿಸಿದ್ದ ಸೀರೆಯನ್ನು ಕಳಚಿದ ಮೋಹಿನಿ, ಅದನ್ನು ಮಡಿಚಿಟ್ಟು, ಹೊಸ ಸೀರೆ ಕೈಗೆತ್ತಿಕೊಂಡು ಅದರ ಗಳಿಗೆಗಳನ್ನು ಬಿಡಿಸುತ್ತ ನಿಂತವಳು ಏತಕ್ಕೋ ಕತ್ತೆತ್ತಿ ನೋಡಿದಳು

ಕನ್ನಡಿಯಲ್ಲಿ ಪ್ರತಿಬಿಂಬ

ಸಾಹುಕಾರರು!

ಭಯಗ್ರಸ್ತಳಾಗಿ ಸೀರೆಯನ್ನು ಎದೆಗವಚಿಕೊಂಡಳು.

“ಹೆದರಬೇಡ ಮೋಹಿನಿ.”

“ನೀವು ಹೀಗೆ ಬರಬಾರದು—”

ಮಂಚದೆದುರಿಗಿದ್ದ ಸೋಫಾ ಮೇಲೆ ಕುಳಿತ ಸಾಹುಕಾರರು,

“ನೀನು ಬರೀ ಮೋಹಿನಿಯಲ್ಲ- ಭುವನಮೋಹಿನಿ.”

“ಹೊರಗೆ ಹೋಗಿ, ನಾನು ಸೀರೆ ಕಟ್ಟಿಕೊಳ್ಳುತ್ತೇನೆ.”

“ನಾನು ನೋಡಬಯಸುವುದು ಸೀರೆಯನ್ನಲ್ಲ ಮೋಹಿನಿ”

ಎಂದು ನಕ್ಕರು.

ಮೋಹಿನಿಯ ಮುಖದ ಮೇಲೆ ಭಯದ ರೇಖೆಗಳು ಆಳವಾಗಿ ಮೂಡಲು ಸಾಹುಕಾರರು,

“ಹೆದರಬೇಡ ನಾನು ಹೇಳುವುದನ್ನು ಸಾವಕಾಶವಾಗಿ ಕೇಳು- ನಿನ್ನ ಮನಸ್ಸಿಗೆ ವಿರುದ್ಧವಾಗಿ ನಾನು...”

“...............”

“ನಿನಗೆ ಉಜ್ವಲ ಭವಿಷ್ಯವಿದೆ - ಆ ಭವಿಷ್ಯ ನನ್ನ ಕೈಯಲ್ಲಿದೆ”

“............”

"ನಿನ್ನನ್ನು ಭುವನ ನಾಟ್ಯಮೋಹಿನಿಯನ್ನಾಗಿ ಮಾಡಬೇಕೆಂದು ನನ್ನ ಆಸೆ. ಮದರಾಸಿನಲ್ಲಿ ನೀನು ಉಚ್ಚ ಶಿಕ್ಷಣ ಪಡೆಯಬೇಕೆಂದು ಬಯಸುತ್ತಿರುವೆಯಂತೆ"

"ಹೌದು."

"ನಾನು ನಿನ್ನನ್ನು ಮದರಾಸಿಗೆ ಕಳಿಸಿಕೊಡುತ್ತೇನೆ. ಎಷ್ಟೇ ಖರ್ಚಾದರೂ ಚಿಂತೆಯಿಲ್ಲ"

"ಮದರಾಸಿನಲ್ಲಿ ನಾನು ಎರಡು ವರ್ಷವಾದರೂ ಇರಬೇಕಾಗುತ್ತದೆ."

"ಇರು- ನಿನ್ನ ಶಿಕ್ಷಣ ಮುಗಿದ ಮೇಲೆ ನಾನೇ ನಿನ್ನನ್ನು ಇಂಗ್ಲೆಂಡಿಗೆ ಕರೆದುಕೊಂಡು ಹೋಗುತ್ತೇನೆ. ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಸ್ವೀಡನ್, ನಾರ್ವೆಗಳಲ್ಲಿ ನಿನ್ನ ನಾಟ್ಯಪ್ರದರ್ಶನ ಏರ್ಪಡಿಸುತ್ತೇನೆ. ಇನ್ನು ಎರಡು ಮೂರು ವರ್ಷಗಳಲ್ಲಿ ನಿನ್ನ ಹೆಸರು ಎಲ್ಲರ ಬಾಯಲ್ಲೂ ನಲಿದಾಡುವಂತೆ ಮಾಡುತ್ತೇನೆ"

ಎಂದೆದ್ದು ಅವಳ ಬಳಿ ಸರಿಯಲು, ಮೋಹಿನಿ ಕಾತರದಿಂದ,

"ಬೇಡಿ. ಬೇಡಿ. ಹತ್ತಿರ ಬರಬೇಡಿ. ಅಲ್ಲೇ ಇರಿ"

ಎಂದಳು.

ಅವಳ ಸಮೀಪಗತವಾಗಿದ್ದ ಸಾಹುಕಾರರು, ಸೀರೆಯನ್ನು ಕಸುಗೊಂಡು, ಸೋಫಾದ ಮೇಲೆ ಎಸೆದು, ಅವಳನ್ನು ಭರದಿಂದ ಅಪ್ಪಿದರು.

ಸಾಹುಕಾರರ ಬಾಹುಬಂಧನದಿಂದ ಬಿಡಿಸಿಕೊಳ್ಳಲು ಮೋಹಿನಿ ಹೆಣಗಾಡಿದಳು.

ಸಾಧ್ಯವಾಗಲಿಲ್ಲ.

"ಮೋಹಿನಿ- ಮೋಹಿನಿ. ನನ್ನ ಕಣ್ಮಣಿ"

ಸಾಹುಕಾರರೊಂದಿಗೆ ಹೋರಾಡಿ ಮೋಹಿನಿ ಕೈ ಸೋತುಹೋಯಿತು.

"ನೀನು ನನ್ನ ಪ್ರಿಯೆ- ನನ್ನ ಸುಂದರಿ- ನನ್ನ ಮೋಹಿನಿ"

ಎಂದವಳನ್ನು ಸಾಹುಕಾರರು ಚುಂಬಿಸಿದರು.

ದುರ್ಬಲವಾಗಿದ್ದ ಮೋಹಿನಿಯ ಕೈಗಳು ಸೋತುಬಿದ್ದವು.

ಸಾಹುಕಾರರು ಅವಳನ್ನು ಎತ್ತಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದರು.

ಸಾಹುಕಾರರು ತೃಪ್ತರಾಗಿ ಪಕ್ಕಕ್ಕೆ ಹೊರಳಿದ ಮೇಲೆ ಮೋಹಿನಿ, ಕಾಲು ಬಳಿಯಿದ್ದ ರಗ್ಗನ್ನೆಳೆದು ಹೊದೆದುಕೊಂಡು ಕುಳಿತು, ಕಣ್ಣೀರ್ಗರೆಯಲಾರಂಭಿಸಿದಳು.

ಸಾಹುಕಾರರು ಎದ್ದು ಕುಳಿತು ಅವಳ ತಲೆ ನೇವರಿಸುತ್ತಾ

"ಅಳಬೇಡ ಮೋಹಿನಿ... ಎಂದೆಂದಿಗೂ ನಾನು ನಿನ್ನವನು...."

"ದೊಡ್ಡ ಮನುಷ್ಯರಾಗಿ ನೀವು ಇಂಥ ಕೆಲಸ ಮಾಡಬಹುದೇ ? ನಿಮ್ಮನ್ನು ನಂಬಿ ನಾನು ಇಲ್ಲಿಗೆ ಬಂದುದೇ ನನ್ನ ತಪ್ಪಾಗಬೇಕೇ ?"

"ಪ್ರಮಾದವೇನಾಯಿತು ?"

"ಇನ್ನೇನಾಗಬೇಕು"

"ನಿನ್ನ ನನ್ನ ಇಬ್ಬರ ಭವಿಷ್ಯವೂ ದೃಢವಾಯಿತು."

"ನಿಮ್ಮ ಭವಿಷ್ಯ....?"

"ಹೌದು, ನಿನ್ನಂಥ ನಲ್ಲೆಗಾಗಿ ನಾನು ಆರಸುತ್ತಿದ್ದೆ. ರೂಪ, ವಿದ್ಯೆ, ಗುಣ ಮೂರೂ ಒಂದೆಡೆಯಲ್ಲಿಯೇ ಇರಬೇಕೆಂದು ಬಯಸುತ್ತಿದ್ದೆ."

"ನನ್ನ ಗುಣ ಇವತ್ತು ಮಣ್ಣುಗೂಡಿಹೋಯಿತು. ಈ ಅಪಮಾನದ ಉರಿಯಲ್ಲಿ ನಾನು ಬೆಂದು ಹೋಗುತ್ತೇನೆ."

"ಚಿನ್ನವನ್ನು ಬೆಂಕಿಗೆ ಹಾಕಿದಲ್ಲದೆ ಅದು ಪುಟವಾಗುವುದಿಲ್ಲ ಮೋಹಿನಿ."

"ಅಯ್ಯೋ. ನನ್ನ ತಾಯಿಗೆ ನಾನು ಹೇಗೆ ಮುಖ ತೋರಿಸಲಿ? ಮಾನಕ್ಕಾಗಿ ಬಾಳಿದ ಮನೆತನ ನನ್ನದು. ನನ್ನ ತಾಯಿ ಏನೂ ಅರಿಯದವರು. ನಾನೇ ಅವರ ಸರ್ವಸ್ವ!"

ಸಾಹುಕಾರರ ಉಪಚಾರೋಕ್ತಿಗಳೂ, ಸಮಾಧಾನದ ನುಡಿಗಳೂ ನಿಷ್ಪ್ರಯೋಜಕವಾದವು.

ಸಾಹುಕಾರರು ಬೇಸತ್ತು ಮೇಲಕ್ಕೆದ್ದು,

"ನಿನ್ನ ದುಃಖೋದ್ಗಾರ ಕಂಡು ನನಗೆ ಬೇಸರ ಬಂದಿದೆ ಮೋಹಿನಿ- ನಿನ್ನನ್ನು ನೋಡಿದ ದಿನವೇ ನಾನು ನಿನಗೆ ಮನಸೋತೆ. ನಾನೇನು ಹೆಣ್ಣಿನ ಮುಖ ಕಾಣದವನಲ್ಲ. ಅವರ ಬಜಾರಿಗುಣ ಕಂಡು ಕಂಡು ನನಗೆ ಅಸಹ್ಯವಾಗಿತ್ತು. ಅವರೆಲ್ಲರೂ ನನ್ನ ಹಣ - ಅಧಿಕಾರ ಪ್ರಭಾವಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ನನ್ನ ಸ್ನೇಹ ಬೆಳಸುತ್ತಿದ್ದರು. ನನಗೆ ಬೇಕಿದ್ದುದ್ದು ಮೀಸಲು ಹೆಣ್ಣು. ನನಗಾಗಿ ನನ್ನನ್ನು ಪ್ರೀತಿಸುವ ಒಂದು ಜೀವ. ಅಂಥ ಜೀವ ಕಾಣಲು ನಾನು ಹಲವು ವರ್ಷಗಳಿಂದ ಕಾಯುತ್ತಿದ್ದೆ. ನೀನು ಸಿಕ್ಕಿದೆ. ನನ್ನ ಸರ್ವಸ್ವವನ್ನೂ ನಿನಗೆ ಧಾರೆಯೆರೆಯಲು ನಿರ್ಧರಿಸಿದೆ. ಆದರೆ ನನ್ನ ಅದೃಷ್ಟ ಚೆನ್ನಾಗಿಲ್ಲ - ನೀನೂ ನನ್ನನ್ನು ನಿರಾಕರಿಸುತ್ತಿರುವೆ."

ಮೋಹಿನಿ ಮೆಲ್ಲನೆ ಕತ್ತೆತ್ತಿ ನೋಡಿದಳು.

ಸಾಹುಕಾರರ ಮುಖ ಕಂಗೆಟ್ಟಿತ್ತು. ಕಣ್ಣುಗಳಲ್ಲಿ ಹನಿಗೂಡಿದ್ದವು.

ಸ್ವಲ್ಪ ಹೊತ್ತಿಗೆ ಮುಂಚೆ ನಡೆದಿದ್ದ ಘಟನೆ ಮೋಹಿನಿಯನ್ನು ಚಕಿತಳನ್ನಾಗಿಸಿತ್ತು.

ಅವಳ ಮನಸ್ಸು ತೂಗುಯ್ಯಾಲೆಯಂತೆ ಆಡುತ್ತಿತ್ತು.

"ನಾನು ಹೋಗುತ್ತೇನೆ ಮೋಹಿನಿ, ಪುನಃ ನಿನ್ನ ಮುಖಾವಲೋಕನ ಮಾಡುವುದಿಲ್ಲ. ನನ್ನ ಅಪರಾಧ ಕ್ಷಮಿಸು. ನೀನು ಏನಾದರೂ ಹೇಳುವುದಿದ್ದರೆ ಲೋಕಾಭಿಯೊಂದಿಗೆ ಹೇಳು. ಅವನನ್ನು ಕಳಿಸುತ್ತೇನೆ."

ಎಂದು ಹೊರಗೆ ಹೋದರು.

ಮೋಹಿನಿ ಎದ್ದು ತಾನು ಧರಿಸಿಬಂದಿದ್ದ ಸೀರೆಯನ್ನೇ ಧರಿಸಿದಳು. ಸಾಹುಕಾರರು ಕೊಟ್ಟಿದ್ದ ಉಡುಗೊರೆ ಸೋಫಾದ ಮೇಲೆ ಬಿದ್ದಿತ್ತು.

ಅದನ್ನು ಕಣ್ಣೆತ್ತಿಯೂ ನೋಡದೆ ಮೋಹಿನಿ ಮುಖಮಾರ್ಜನೆ ಮಾಡಿಕೊಂಡು, ಮುಖಕ್ಕೆ ತೆಳುವಾಗಿ ಪೌಡರ್ ಲೇಪಿಸಿಕೊಂಡಳು.

ಹೊರಬಾಗಿಲಿನಲ್ಲಿ ನಿಂತ ಲೋಕಾಭಿ,

"ಒಳಗೆ ಬರಲೇನ್ರಮ್ಮಾ" ಎಂದ.

"ಬನ್ನಿ"

ಲೋಕಾಭಿ ಒಳಗೆ ಪ್ರವೇಶಿಸಿ, ಮೋಹಿನಿ ಸಾಲಂಕೃತಳಾಗಿದ್ದುದನ್ನು ಕಂಡು,

"ಹೊರಟು ಬಿಡುತ್ತೀರೇನ್ರಮ್ಮಾ?" ಎಂದ.

"ಹೂ"

"ಯಾಕ್ರಮ್ಮಾ."

"ಸಾಕು ಬಿಡ್ರಿ. ನೀವೂ ನಿಮ್ಮ ಸಾಹುಕಾರರು ತುಂಬ ದೊಡ್ಡ ಮನುಷ್ಯರು. ನಿಮ್ಮನ್ನು ನಂಬಿ ನಾನು ಇಲ್ಲಿಗೆ ಬಂದುದಕ್ಕೆ ಇಂಥ ಕೆಲಸವೇ ನೀವು ಮಾಡುವುದು ?"

ಲೋಕಾಭಿ ನಕ್ಕು,

"ನಿಮಗೆ ವಿವೇಕ ಇಲ್ಲ ಕಣ್ರಮ್ಮಾ."

"ಹೌದು- ವಿವೇಕವಿದ್ದಿದ್ದರೆ ಇಲ್ಲಿಗೇಕೆ ಬರುತ್ತಿದ್ದೆ."

"ಅಯ್ಯೋ ನಾರಾಯಣ.- ನನ್ನ ಮಾತು ಕೇಳಿಯಮ್ಮ"

"ನಿಮ್ಮ ಮಾತು ಕೇಳಿದೆನಲ್ಲಾ ಲೋಕಾಭಿರಾಮ್"

"ಹೋಗಲಿ ಬಿಡಿ. ನಿಮ್ಮ ಇಷ್ಟ."

"............"

"ಸಾಹುಕಾರರನ್ನು ದೂರಮಾಡಿಕೊಳ್ಳಬೇಡಿ."

"............."

"ಇವತ್ತು ಕೂಡಿರುವ ಬಾಂಧವ್ಯ ನಡೆದುಕೊಂಡು ಹೋಗಲಿ. ಆ ಮನುಷ್ಯ ನಿಮಗೋಸ್ಕರ ಪ್ರಾಣ ಬಿಡ್ತಾ ಇದ್ದಾರೆ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವುದು ನ್ಯಾಯವಲ್ಲ."

ಮೋಹಿನಿ ಯೋಚಿಸುತ್ತ ಕುಳಿತಳು.

'ಹೋದ ಶೀಲ ಮರಳಿ ಬರುವುದಿಲ್ಲ.'

ಪರಿಸ್ಥಿತಿಯ ಸದುಪಯೋಗ ಏಕೆ ಪಡೆದುಕೊಳ್ಳಬಾರದು?

"ಸಾಹುಕಾರರು ಲೋಕ ಆಳುತ್ತಾ ಇದ್ದಾರೆ. ನೀವು ಅವರನ್ನು ಆಳಬಹುದು"

'ಲೋಕಾಭಿರಾಮ ಹೇಳುವುದು ನಿಜ-

ಸಾಹುಕಾರ ಬಲಿಷ್ಠ. ಪ್ರಭಾವಶಾಲಿ. ಅವನನ್ನು ಉಪಯೋಗಿಸಿಕೊಂಡು ನಾನೇಕೆ ಹತ್ತು ಜನರ ಕಷ್ಟ ನೀಗಬಾರದು.'

"ನೀವು ದೂರವಾಗುತ್ತೇನೆಂದರೆ ಅವರು 'ಹೂ' ಅನ್ನುತ್ತಾರೆ. ಅವರಿಗೆ ಹೆಂಗಸರ ಕೊರತೆಯಿದೆಯೆಂದು ಭಾವಿಸಬೇಡಿ..."

"ಆ ವಿಷಯ ಸಾಹುಕಾರರೇ ಹೇಳಿದ್ದಾರೆ."

"ಇವತ್ತು ನೀವು ಬಂದದ್ದಕ್ಕೆ ಏನು ಬೇಕಾದರೂ ಅವರು ಕೊಡುತ್ತಾರೆ."

"ಆ ರೀತಿ ನಾನು ಜೀವನ ಮಾಡಬೇಕಾಗಿಲ್ಲ ಲೋಕಾಭಿರಾಮ್."

"ಹಾಗಲ್ಲಮ್ಮಾ ನಾನು ಹೇಳಿದ್ದು. ಯಾರ ದಾಕ್ಷಿಣ್ಯಕ್ಕೂ ಸಾಹುಕಾರರು ಕಟ್ಟುಬೀಳುವುದಕ್ಕೆ ಇಚ್ಛ್‌ಸುವುದಿಲ್ಲ. ಸ್ವಲ್ಪ ಯೋಚನೆ ಮಾಡಿ. ನೀವು ಮನಸ್ಸು ಬದಲಾಯಿಸುವ ಹಾಗಿದ್ದರೆ ಸಾಹುಕಾರರು ಕೊಟ್ಟಿರುವ ಸೀರೆ ಉಟ್ಟುಕೊಂಡು ಹೊರಗೆ ಬನ್ನಿ- ನಾನೂ ಊಟ ರೆಡಿ ಮಾಡಿಸಿರುತ್ತೇನೆ"

ಎಂದು ಹೇಳಿ ಹೊರಗೆ ಹೋದ.

ಮೋಹಿನಿ ಯೋಚಿಸುತ್ತ ಕುಳಿತಳು.

ಲೋಕಾಭಿರಾಮ ಹೊರಗೆ ಬಂದ ಕೂಡಲೆ ಸಾಹುಕಾರರು ಅತ್ಯಾತುರದಿಂದ,

“ಏನು ಹೇಳಿದಳು ಲೋಕಾಭಿ” ಎಂದರು.

“ಹೇಳುವುದೆಲ್ಲಾ ಹೇಳಿದ್ದೇನೆ ಸ್ವಾಮಿ. ಯೋಚಿಸುತ್ತಿದ್ದಾಳೆ. ಐದು ನಿಮಿಷ ಕಾದು ನೋಡೋಣ.”

“ಆಗಲಿ. ಗುಂಡು ತೆಗೆದುಕೊಳ್ಳಯ್ಯ.”

ಒಳಗಿನ ಕೋಣೆಯಲ್ಲಿದ್ದ ಪಾನ ಪರಿಕರಗಳನ್ನು ತಂದು ಲೋಕಾಭಿ ಮೇಜಿನ ಮೇಲೆ ಜೋಡಿಸಿಟ್ಟ.

ಸಾಹುಕಾರರು ಒಂದು ಗ್ಲಾಸಿಗೆ ಸ್ವಲ್ಪ ವಿಸ್ಕಿ ಹಾಕಿಕೊಂಡರು. ಲೋಕಾಭಿ ನೀರು ಬೆರಸಿದ.

“ನೀನೂ ತೊಗೋ” ಎಂದರು.

ಲೋಕಾಭಿರಾಮ ಇನ್ನೊಂದು ಗ್ಲಾಸ್ ಕೈಗೆತ್ತಿಕೊಂಡು ಸ್ವಲ್ಪ ವಿಸ್ಕಿ ಸುರುವಿಕೊಂಡು ನೀರು ಬೆರಸಿದ.

“ಅವಳು ದಾರಿಗೆ ಬರುವ ಹಾಗೆ ಕಾಣುತ್ತದೆಯೇ ಲೋಕಾಭಿ.”

“ನಿಮಗೂ ಬಲೇ ಆತುರ ಸ್ವಾಮಿ.”

“ಆತುರ ಅಲ್ಲ ಕಣೋ- ವಿಷಯಗಳು ಚಕ್-ಚಕ್ ಎಂದು ನಿರ್ಧರವಾಗಿಬಿಡಬೇಕು.”

ಎಂದು ತಮ್ಮ ಪಾನೀಯ ಮುಗಿಸಿ ಗ್ಲಾಸ್ ಮೇಜಿನ ಮೇಲಿಟ್ಟರು.

ರೂಮಿನ ಬಾಗಿಲು ತೆಗೆದ ಶಬ್ದವಾಯಿತು.

ಲೋಕಾಭಿರಾಮ ಧಡಕ್ಕನೆ ಮೇಲಕ್ಕೆದ್ದ.

ಸಾಹುಕಾರರು ಕೊಟ್ಟಿದ್ದ ಉಡುಗೊರೆಯ ಸೀರೆ ಧರಿಸಿದ್ದ ಮೋಹಿನಿ ಹೊರಗೆ ಬಂದಳು.

ಲೋಕಾಭಿರಾಮ ಸಡಗರದಿಂದ,

“ಹೀಗೆ ಬನ್ನಿಯಮ್ಮ”

ಎಂದವಳನ್ನು ಕರೆತಂದು ಸಾಹುಕಾರರ ಪಕ್ಕದಲ್ಲಿ ಕೂಡಿಸಿದ.

ಸಾಹುಕಾರರು ಮಂದಹಾಸ ಬೀರಿ,

“ಕೋಪ ಹೋಯಿತೇ ?”

ಎಂದು ಕೇಳಿದರು.

ಮೋಹಿನಿ ಮುಗುಳ್ನಗೆ ಬೀರಿದಳು.

“ನೀನು ಏನು ತೆಗೆದುಕೊಳ್ಳುತ್ತೀ ಮೋಹಿನಿ ?”

ಮೇಜಿನ ಮೇಲಿದ್ದ ಶೀಷೆಯನ್ನು ನೋಡಿದ ಮೋಹಿನಿ,

"ಇದು ವಿಸ್ಕಿ- ನಾನು ಇವುಗಳನ್ನು ತೆಗೆದುಕೊಳ್ಳುವುದಿಲ್ಲ."

"ಸ್ವಲ್ಪ ವೈನ್ (Wine) ತೊಗೋ. ಮೈಗೂ ಒಳ್ಳೆಯದು. ಲೋಕಾಭಿ, ರೂಮಿನಲ್ಲಿ ಎಮ್ಮೋ (Emmo) ವೈನ್ ಶೀಸೆ ಇದೆ ತೆಗೆದುಕೊಂಡು ಬಾ."

ಲೋಕಾಭಿರಾಮ ತಂದಿತ್ತ ವೈನ್ ಶೀಷೆಯ ಮುಚ್ಚಳ ತೆಗೆದು ಒಂದು ವೆಗ್‌ನಷ್ಟು ವೈನ್ ಹಾಕಿ,

"ನಿನ್ನ ನನ್ನ ಗ್ಲಾಸ್ ಭರ್ತಿ ಮಾಡು ಲೋಕಾಭಿ" ಎಂದರು.

ಲೋಕಾಭಿರಾಮ ಗ್ಲಾಸ್ ಭರ್ತಿ ಮಾಡಿ ಒಂದನ್ನು ಸಾಹುಕಾರರ ಕೈಗಿತ್ತ,

ಸಾಹುಕಾರರು ಗ್ಲಾಸ್ ಎತ್ತಿ ಹಿಡಿದು,

"ನನ್ನ- ಮೋಹಿನಿಯ ಚಿರಸ್ನೇಹ- ಪ್ರೇಮಕ್ಕೆ..."

ಎಂದು ಒಂದೇ ಗುಟುಕಿಗೆ ಗ್ಲಾಸ್ ಮುಗಿಸಿದರು.

ಲೋಕಾಭಿಯೂ ಗ್ಲಾಸ್ ಖಾಲಿ ಮಾಡಿದ.

ಮೋಹಿನಿ ಎರಡು ಮೂರು ಸಲ ಗುಟುಕರಿಸಿ ತನ್ನ ಗ್ಲಾಸ್ ಮುಗಿಸಿದಳು.

"ವೈನ್ ಚೆನ್ನಾಗಿತ್ತೇ ?"

"ಚನ್ನಾಗಿತ್ತು"

"ವೈನ್ ಲೇಡೀಸ್ ಡ್ರಿಂಕ್ (Ladies drink)- ಇದರಿಂದ ತೊಂದರೆಯಾಗುವುದಿಲ್ಲ."

"ನಾನು ಮಲೇರಿಯಾ ಜ್ವರ ಅನುಭವಿಸಿ ಎದ್ದ ಮೇಲೆ ಬಕ್‌ಫಾಸ್ಟ್ ಟಾನಿಕ್ ವೈನ್ (Buckfast Tonic Wine) ತೆಗೆದುಕೊಳ್ಳುತ್ತಿದ್ದೆ."

"ಹಾಗಾದರೆ ಭಯವೇನು. ಗ್ಲಾಸಿಗೆ ಇನ್ನಷ್ಟು ವೈನ್ ಹಾಕು ಲೋಕಾಭಿ"

ಎಂದು ಸಾಹುಕಾರರು ಉತ್ಸಾಹದಿಂದ ನುಡಿದರು.

೬

ಸಾಹುಕಾರ ಹೊನ್ನಪ್ಪನವರ ರೆಸಿಡೆನ್ಸಿ ರೋಡ್ ಗೃಹದಲ್ಲಿ ಮೋಹಿನಿ ಹಳಬಳಾಗಲು ವಿಳಂಬವಾಗಲಿಲ್ಲ. ಆಳುಗಳಿಗೆಲ್ಲಾ ಅವಳು ಸುಪರಿಚಿತಳಾದಳು. ಹೊನ್ನಪ್ಪನವರು ಮನೆಯಲ್ಲಿಲ್ಲದಿದ್ದರೂ ಮೋಹಿನಿ ಅವರಿಗಾಗಿ ಕಾಯುತ್ತ ಕೂಡುವಳು.

ಬೆಳಿಗ್ಗೆ ಯಥಾಕ್ರಮದಂತೆ ಒಂಭತ್ತೂವರೆಗೆ ಕಾಲೇಜಿಗೆಂದು ಹೊರಟ ಮೋಹಿನಿ ನೇರವಾಗಿ ರೆಸಿಡೆನ್ಸಿ ರಸ್ತೆಗೆ ಬರುತ್ತಿದ್ದಳು.

ಒಂದೊಂದು ದಿನ ತಾಯಿಗೆ.

“ಇವತ್ತು ಸಾಯಂಕಾಲ ನಾನು ಮನೆಗೆ ಬರುವುದಿಲ್ಲಮ್ಮಾ. ಹಾಸ್ಟಲ್ಲಿಗೆ ಹೋಗಿ ಕುಸುಮನ ಜತೆ ಇರುತ್ತೇನೆ. ಅವಳು ಬಹಳ ಪೀಡಿಸುತ್ತಿದ್ದಾಳೆ”

ಎಂದು ಹೇಳಿ ರಾತ್ರಿಯನ್ನೂ ರೆಸಿಡೆನ್ಸಿಯಲ್ಲಿ ಕಳೆಯುತ್ತಿದ್ದಳು.

ಅತಿ ಸಲಿಗೆ, ಅತಿ ಸ್ನೇಹ ಹೊನ್ನಪ್ಪನವರ ಉದ್ವೇಗವನ್ನು ಪ್ರಶಾಂತಗೊಳಿಸುತ್ತಿತ್ತು.

ಒಂದು ದಿನ ಮೋಹಿನಿ,

“ನಾನು ನಿತ್ಯ ಹೀಗೆ ಬರುವುದಕ್ಕಾಗುವುದಿಲ್ಲ. ಕಾಲೇಜಿನಲ್ಲಿ ಟರ್ಮು (Term) ಹೋಗುತ್ತಿದೆ” ಎಂದಳು.

“ನಿತ್ಯ ಬಾರೆಂದು ಹೇಳಿದೆನೇ ?”

“ನಾನು ಬರುವುದು ನಿಮಗಿಷ್ಟವಿಲ್ಲವೇನೋ?”

“ಇಲ್ಲದ ಜಗಳ ತೆಗೆಯಬೇಡ ಮೋಹಿನಿ. ನನಗೆ ಇಷ್ಟವಿದೆಯೋ ಇಲ್ಲವೋ ನಿನಗೆ ಗೊತ್ತಿದೆ. ಆಡಿದ ಮಾತನ್ನೇ ಆಡಿ ಏನು ಪ್ರಯೋಜನ”

“ಸರಿ. ನಾನು ಮನೆಗೆ ಹೊರಡುತ್ತೇನೆ”

ಎಂದು ಹೇಳಿದ ಮೋಹಿನಿ ಶಯ್ಯಾಗೃಹಕ್ಕೆ ಬಂದು, ಇಲ್ಲಸ್ಟ್ರೇಟೆಡ್ ವೀಕ್ಲಿ (Illustrated Weekly) ಹಿಡಿದು ಕುಳಿತುಬಿಟ್ಟಳು

ಒಂದೇ ಸಮನಾಗಿ ಗಣಗಂಟೆ ಬಾರಿಸುತ್ತಿದ್ದ ಫೋನ್ ನೋಡಿಕೊಂಡು ಒಳಗೆ ಬಂದ ಸಾಹುಕಾರರು ಬೆಕ್ಕಸ ಬೆರಗಾಗಿ,

“ನೀನು ಹೊರಟುಹೋದೆಯೆಂದಿದ್ದೆ!” ಎಂದರು.

“ನನ್ನ ಕಳಿಸಿದರೆ ಸಾಕು ಎಂದಿದ್ದೀರೇನೋ?”

“ಏಕೆ ?”

“ಇದ್ದಾನಲ್ಲಾ ನಿಮ್ಮ ಶಿಷ್ಯ ಲೋಕಾಭಿ- ಯಾವದಾದರೂ ಏರ್ಪಾಟು ಮಾಡಿರುತ್ತಾನೆ.”

ಸಾಹುಕಾರರು ಗಹಗಹಿಸಿ ನಕ್ಕು,

“ಅಸೂಯೆಯಿಲ್ಲದಿದ್ದರೆ ಹೆಣ್ಣು ಜನ್ಮ ಪೂರ್ಣವೇ ಆಗುವುದಿಲ್ಲ ಅಲ್ಲವೇ ಮೋಹಿನಿ ?”

ಮೋಹಿನಿ ಸಾಹುಕಾರರ ಕೈ ಹಿಡಿದು, ಅವರನ್ನು ಪಕ್ಕದಲ್ಲಿ ಕೂಡಿಸಿಕೊಂಡು,

“ನಿಜ ಹೇಳ್ರೀ?”

“ಏನು?”

“ಈಗ ಇನ್ನು ಯಾರ ಸ್ನೇಹವೂ ಇಲ್ಲವೇ?”

“ನೀನೇ ನೋಡುತ್ತಿರುವೆಯಲ್ಲಾ- ಇಲ್ಲಿಗೆ ಯಾರಾದರೂ ಬಂದಿದ್ದಾರೆಯೇ ?”

“ಇಲ್ಲ ಹೊರಗೆ.......”

“ನಾನು ಹೊರಗೆ ಹೋಗಲು ಸಾಧ್ಯವೇ ಮೋಹಿನಿ.”

“ನಾನು ಇವತ್ತು ಮನೆಗೆ ಹೋಗುವುದಿಲ್ಲ.”

“ಒಳ್ಳೆಯದು. ನಿಮ್ಮ ತಾಯಿಯವರು ಆತಂಕ ಪಟ್ಟುಕೊಳ್ಳುವುದಿಲ್ಲವೇ ?”

“ನಾನು ಒಂದು ಕಾಗದ ಬರೆದು ಕೊಡುತ್ತೇನೆ. ಯಾರ ಕೈಯಲ್ಲಾದರೂ ನಮ್ಮ ಮನೆಗೆ ಕಳಿಸಿ”

“ಕೊಡು- ಮಾದಯ್ಯನ ಕೈಲಿ ಕಳಿಸುತ್ತೇನೆ.”

“ನಮ್ಮ ತಾಯಿ ’ನೀನು ಯಾರು ಎಂದವನನ್ನು ಕೇಳಿದರೆ ’ನಾನು ಹಾಸ್ಟಲ್ ಆಳು’ ಎಂದು ಅವನು ಹೇಳಬೇಕು.”

“ಕಾಗದ ಬರೆದು ಕೊಡು-”

ಎಂದರು.

ಅವಳು ಕಾಗದ ಬರೆದು ಅವರ ಕೈಯಲ್ಲಿಡಲು ಸಾಹುಕಾರರು ಹೊರಗೆಹೋಗಿ ಮಾದಯ್ಯನ ಕೈಗೆ ಕಾಗದವಿತ್ತು,

“ಮೋಹಿನಿ ತಾಯಿಯವರಿಗೆ ತಲುಪಿಸು. ನೀನು ಯಾರು ಎಂದು ಕೇಳಿದರೆ ಹಾಸ್ಟಲ್ ಆಳು ಎಂದು ಹೇಳು.”

ಮಾದಯ್ಯ ಹೋದ ಕೂಡಲೇ ಒಳಗೆ ಧಾವಿಸಿ ಬಂದ ಲೋಕಾಭಿರಾಮ,

"ಮೋಹಿನಿ ಹೋದಳೇ ಸ್ವಾಮಿ" ಎಂದ.

"ಇಲ್ಲ ಲೋಕಾಭಿ. ರಾತ್ರಿ ಇಲ್ಲೇ ಇರುತ್ತೇನೆಂದು ಹಟ ಹಿಡಿದಿದ್ದಾಳೆ. ಅವರಮ್ಮನಿಗೆ ಚೀಟಿ ಬರೆದು ಮಾದನ ಕೈಲಿ ಕಳಿಸಿದ್ದಾಳೆ."

"ಒಳ್ಳೆಯ ಪೀಡೆ ಗಂಟುಬಿತ್ತಲ್ಲಾ ಸ್ವಾಮಿ."

"ಏಕೆ ?"

"ಇವತ್ತು ಹೊಸದೊಂದು ಏರ್ಪಾಟು ಮಾಡಿಕೊಂಡು ಬಂದಿದ್ದೆ- ಇಲ್ಲಿ ಐಬಾಗಿದೆ."

"ಯಾರು ಅದು?"

"ಮಂಗಳೂರು ಮಾಲು. ಹೆಸರು ಕೃಷ್ಣಾ ಕುಮಾರಿ. ತೋಟದಪ್ಪನವರ ಛತ್ರದಲ್ಲಿ ಇಳಿದುಕೊಂಡಿದ್ದಾಳೆ."

"ನಿನಗೆಲ್ಲಿ ಸಿಕ್ಕಿದಳು ?"

"ಅವಳ ಗಂಡ ನನಗೆ ಪೂರ್ವ ಪರಿಚಯಸ್ಥ. ಇವತ್ತು ಅಕಸ್ಮಾತ್ತಾಗಿ ಅವೆನ್ಯೂ ರೋಡಿನಲ್ಲಿ ಸಿಕ್ಕಿದ. ಅವನ ಜತೆ ಹೋಗಿ ಕೃಷ್ಣನನ್ನು ನೋಡಿಕೊಂಡು, ವ್ಯವಸ್ಥೆ ಮಾಡಿಕೊಂಡು ಬಂದೆ."

"ನಾಳೆ ಬೆಳಿಗ್ಗೆ ಕರೆದುಕೊಂಡೇ ಬಂದುಬಿಡು."

"ಮೋಹಿನಿ ಆಫೀಸ್ ಟೈಮಿಗೆ ಸರಿಯಾಗಿ ಹಾಜರಾಗುತ್ತಾಳಲ್ಲಾ !"

"ನಾನು ಊರಿನಲ್ಲಿ ಇರುವುದಿಲ್ಲವೆಂದು ಹೇಳುತ್ತೇನೆ."

"ಹಾಗಾದರೆ ಸರಿ."

"ಒಳಗೆ ಹೋಗಿ ಟೇಬಲ್ ವ್ಯವಸ್ಥೆ ಮಾಡು ಲೋಕಾಭಿ."

"ನಮಗೆ ನಿಮ್ಮ ವಿಸ್ಕಿ- ಬ್ರ್ಯಾಂದಿ ಬೇಡ ಸ್ವಾಮಿ."

"ಇನ್ನೇನು ಬೇಕು?"

"ನನ್ನ ಮಾಮೂಲು- ಸ್ತ್ರೀರಾಮ."

"ನನ್ನ ಜತೆ ಕುಳಿತುಕೊಂಡು ಸ್ತ್ರೀರಾಮ ಕುಡೀತೀಯಲ್ಲೋ?"

"ಎಲ್ಲಾ ಒಂದೇ ಸ್ವಾಮಿ. ನಿಮ್ಮದು ವಿಲಾಯಿತಿಯದ್ದು- ನನ್ನದು ಅಪ್ಪಟ ಸ್ವದೇಶಿ."

"ನನಗಿಂತ ನೀನೇ ಹೆಚ್ಚಿನ ಕಾಂಗ್ರೆಸ್ ಭಕ್ತ ಆದೆಯಲ್ಲೋ."

ಲೋಕಾಭಿ ನಕ್ಕು,

"ಹೌದು ಸ್ವಾಮಿ. ಪಡಖಾನೆಗೆ ನಾವು ಕಾಂಗ್ರೆಸ್ ಆಫೀಸ್ ಎಂದೇ ಕರೆಯುವುದು."

"ಅವಿವೇಕಿ-"

ಎಂದು ಕಿಸೆಯಿಂದ ಐದು ರೂಪಾಯಿ ತೆಗೆದು ಅವನ ಕೈಗಿಟ್ಟು,

"ಹೇಗೆ ತರಿಸುತ್ತೀ ?"

"ಅದಕ್ಕೆಲ್ಲಾ ನಮ್ಮ ಜನ ಇದ್ದಾರೆ."

"ಯಾರು?"

"ಅದನ್ನು ಕೇಳಬೇಡಿ."

"ಏಕೆ?"

"ಅವನೂ ನಿಮ್ಮ ತಾಪೇದಾರ. ಅವನ ಬಾಯಿಗೆ ನಾನೇಕೆ ಮಣ್ಣು ಹಾಕಲಿ ?"

"ಸಿದ್ದನೇ?"

ಲೋಕಾಭಿ ತಲೆಯಳ್ಳಾಡಿಸಿ,

"ಐದು ಸಾಲದು ಸಾವುಕಾರ್ರೇ?"

"ಸಿದ್ದನಿಗೂ ಪಾಲು ಕೊಡಬೇಕೇನು ?"

"ಹೂ - ಅವನಿಗರ್ಧ - ನನಗರ್ಧ - ಇನ್ನೊಂದು ಐದು ರೂಪಾಯಿ ಅಪ್ಪಣೆ ಮಾಡಿಬಿಡಿ."

ಸಾಹುಕಾರರು ಅವನ ಕೈಗೆ ಮತ್ತೆ ಐದು ರೂಪಾಯಿ ಹಾಕಿ,

"ಬೇಗ ಬಾ" ಎಂದರು.

"ಒಂದೇ ಮಿನಿಟ್"

ಎಂದು ಲೋಕಾಭಿ ಗ್ಯಾರೇಜ್ ಕಡೆ ಹೊರಟ.

ಇಪ್ಪತ್ತು ನಿಮಿಷಗಳ ತರುವಾಯ ಹಿಂದಿರುಗಿದ ಲೋಕಾಭಿ,

"ಎಲ್ಲಾ ರೆಡಿ (Ready)" ಎಂದ.

"ನಿನ್ನದು?"

"ನನ್ನದೂ ಬಂದಿದೆ."

ಸಾಹುಕಾರರೆದ್ದು ಒಳಹಜಾರಕ್ಕೆ ಬಂದು ಕುಳಿತು,

"ಮೋಹಿನೀ" ಎಂದು ಕೂಗಿದರು.

ಮೋಹಿನಿ ಬಂದು ಅವರ ಪಕ್ಷದಲ್ಲಿ ಕುಳಿತಳು.

ಲೋಕಾಭಿ 'ಸ್ತ್ರೀರಾಮ' ನನ್ನು ಮೊದಲೇ ಒಂದು ಗ್ಲಾಸಿಗೆ ಬಗ್ಗಿಸಿಟ್ಟಿದ್ದ. ಇನ್ನೆರಡು ಗಾಸುಗಳಿಗೆ ವಿಸ್ಕಿ ಬಗ್ಗಿಸುತ್ತಾ,

"ಅಮ್ಮಾವರಿಗೆ ವೈನ್ ಬೇಕೇನೋ" ಎಂದ.

ಸಾಹುಕಾರರು ನಕ್ಕು,

"ಇರಲಿ. ಸುಮ್ಮನೆ ಹಾಕೋ. ತಲೆಯೆಲ್ಲಾ ಹರಟಬೇಡ."

ಮೋಹಿನಿ ತನ್ನ ಗ್ಲಾಸ್ ಅರ್ಧ ಖಾಲಿ ಮಾಡಿ,

"ಇದು ಅಭ್ಯಾಸವಾದ ಮೇಲೆ ವೈನ್ ರುಚಿ ಹತ್ತುವುದಿಲ್ಲ !"

ಒಂದೇ ಗುಟುಕಿಗೆ ತನ್ನ ಗ್ಲಾಸ್ ಬರಿದು ಮಾಡಿದ ಲೋಕಾಭಿರಾಮ,

"ಹೂ. ಹಾಗೇ ಕಣ್ರಮ್ಮ- ಹೊಸ ನೀರು ಬಂದು ಹಳೇ ನೀರು ಕೊಚ್ಚಿಕೊಂಡು ಹೋಯಿತಂತೆ !"

"ಪೂರ್ವಾಪರ ಸಂಬಂಧವೇ ಇಲ್ಲದೆ ಮಾತಾಡ್ತೀಯಲ್ಲೋ ಲೋಭಿ."

"ಇಲ್ಲ ಸ್ವಾಮಿ- ಸರಯಾಗಿ ಹೇಳ್ತಾ ಇದ್ದೀನಿ. ಹೊಟ್ಟೆಗಿನ್ನೂ ಎರಡೇ 'ಸ್ತ್ರೀರಾಮ' ಹೋಗಿರೋದು. ಅಮ್ಮಾವರು ಈಗ ನನ್ನ ಯೋಗಕ್ಷೇಮ ವಿಚಾರಿಸುತ್ತಾರೇನು ಕೇಳಿ."

"ಯಾಕೇ ಮೋಹಿನಿ ?"

"ಸರಿ. ಅವರ ಮಾತು ಕಟ್ಟಿಕೊಳ್ಳಿ"

ಎಂದು ತನ್ನ ಗ್ಲಾಸ್ ಮುಗಿಸಿದ ಮೋಹಿನಿ,

"ನಾನು ಕಾಲೇಜ್ ಬಿಟ್ಟು ಬಿಡುತ್ತೇನ್ರೀ" ಎಂದಳು.

"ಏಕೆ ?"

"ಓದಿನ ಮೇಲೆ ಮನಸ್ಸಿಲ್ಲ."

ಲೋಕಾಭಿರಾಮ 'ಕಿಸಿಕಿಸಿ' ಎಂದು ನಕ್ಕ,

"ಸುಮ್ಮನೆ ಕುಕ್ಕರಿಸೋ"

ಎಂದು ಸಾಹುಕಾರರು ಗದರಿದರು.

"ಈಚೆಗೆ ನಾನು ನೃತ್ಯಾಭ್ಯಾಸವನ್ನೂ ಮಾಡಿಲ್ಲ. ಕಲಿತುದೆಲ್ಲಾ ಮರೆಯುತ್ತಾ ಬಂದಿದೆ."

"ಅದಕ್ಕೇನು ಯೋಚನೆ ಮಾಡಿದ್ದೀ?"

"ನನ್ನನ್ನು ಮದರಾಸಿಗೆ ಕಳಿಸಿಬಿಡಿ."

"ನಿನ್ನ ತಾಯಿ ಒಪ್ಪುತ್ತಾರೆಯೇ ?"

"ನಾನು ಒಪ್ಪಿಸುತ್ತೇನೆ."

"ನೀನು ಹೊರಟು ಹೋದರೆ...."

"ವಾರಕ್ಕೊಮ್ಮೆ ನೀವೇ ಬನ್ನಿ."

"ಅಡೆಯಾರಿನ 'ಕಲಾಕ್ಷೇತ್ರ'ಕ್ಕೆ ಅಪ್ಲಿಕೇಷನ್ ಹಾಕಿದ್ದೀಯಾ ?"

"ನಿಮ್ಮನ್ನು ಕೇಳಿ ಹಾಕಬೇಕೆಂದಿದ್ದೇನೆ."

"ಉನ್ನತ ವ್ಯಾಸಂಗಕ್ಕೆ ನಿನ್ನ ಮದರಾಸಿಗೆ ಕಳಿಸಲು ನಾನು ಮಾತುಕೊಟ್ಟಿದ್ದೇನೆ. ಕಳಿಸುತ್ತೇನೆ, ಮೊದಲು ಸೀಟ್ ಸಂಪಾದಿಸು."

"ಹಾಗೇ ಆಗಲಿ."

ಎಂದು ತನ್ನ ಗ್ಲಾಸ್ ಲೋಕಾಭಿಯ ಮುಂದೆ ತಳ್ಳಿದಳು. ಅವನು ಅವಳ ಗ್ಲಾಸ್ ಸಾಹುಕಾರರ ಗ್ಲಾಸ್ ಭರ್ತಿಮಾಡಿ ಕಿಸೆಯಿಂದ 'ಸ್ತ್ರೀರಾಮ'ನನ್ನು ತೆಗೆದು ತನ್ನ ಗ್ಲಾಸಿಗೆ ಸುರುವಿಕೊಂಡು,

"ಮದರಾಸಿಗೆ ಹೋಗುವಾಗ ನನ್ನ ಮರೀಬೇಡ್ರಮ್ಮಾ."

"ನೀವೂ ಬರುತ್ತೀರಾ ಲೋಕಾಭಿರಾಮ."

"ಖಂಡಿತ ಬರುತ್ತೇನೆ."

"ನನ್ನನ್ನು ಸಾಹುಕಾರರೇ ಕರೆದುಕೊಂಡು ಹೋಗಿ, ಮದರಾಸಿನಲ್ಲಿ ಬಿಟ್ಟು ಬರಬೇಕು."

"ನನಗೆ ಪುರಸತ್ತೆಲ್ಲಿದೆ ಮೋಹಿನಿ."

"ಪುರಸತ್ತು ಮಾಡಿಕೊಳ್ಳಿ. ನಿಮ್ಮ ಫೋನ್ಕಾಲ್, ರಾಜಕೀಯ ಇದ್ದೇ ಇದೆ."

"ನನ್ನ ರಾಜಕೀಯದ ಸ್ವಾರಸ್ಯ ನಿನಗಿನ್ನೂ ಗೊತ್ತಿಲ್ಲ ಮೋಹಿನಿ."

"ಹೇಳಿ ತಿಳಿದುಕೊಳ್ಳುತ್ತೇನೆ."

"ನೀನು ಹೇಳೋ ಲೋಕಾಭಿ."

"ನನಗೇನು ಗೊತ್ತು ಸ್ವಾಮಿ-"

"ಪತ್ರಿಕೆಯ ಸಂಪಾದಕನಾಗಿ ನಿನಗೆ ಗೊತ್ತಿಲ್ಲವೇನೋ?"

ಲೋಕಾಭಿ ತನ್ನ ಗ್ಲಾಸಿನತ್ತ ದೃಷ್ಟಿ ಬೀರಿ,

“ ’ಸ್ತ್ರೀರಾಮ’ ಮುಗಿದು ಹೋಯಿತು. ಸ್ಫೂರ್ತಿ ಬರೋದಿಲ್ಲ” ಎಂದ.

“ವಿಸ್ಕಿ ಇದೆಯಲ್ಲಾ. ಹಾಕಿಕೋ.”

ಅರ್ಧ ಗ್ಲಾಸಿನಷ್ಟು ವಿಸ್ಕಿ ಸುರುವಿಕೊಂಡ ಲೋಕಾಭಿ, ನೀರು ತುಂಬಿಕೊಂಡು, ಒಂದು ಗುಟುಕು ಕುಡಿದು,

“ರಾಜಕೀಯದಲ್ಲಿ ಮುಂದಕ್ಕೆ ಬರಬೇಕಾದರೆ ತ್ಯಾಗ ಇರಬೇಕು ಕಣ್ರಮ್ಮಾ. ಕಾಂಗ್ರೆಸ್ ಸಂಸ್ಥೆಯಲ್ಲಿ ಯಾರು ಯಾರೋ ಬಂದರು. ಯಾರು ಯಾರೋ ಹೋದರು. ಸಾಹುಕಾರರನ್ನು ಅಳ್ಳಾಡಿಸುವುದಕ್ಕೆ ಯಾರ ಕೈಯಿಂದಲೂ ಆಗಿಲ್ಲ. ಏಕೆ ಹೇಳಿ.”

“ತ್ಯಾಗ !”

“ರೈಟ್ (Right) !”

“ಸಾಹುಕಾರರು ಏನು ತ್ಯಾಗ ಮಾಡಿದ್ದಾರೆ ಲೋಕಾಭಿ ?”

ಎಂದು ಮೋಹಿನಿ ನಸುನಕ್ಕಳು.

“ಪ್ರತಿ ಸಲವೂ ಮಂತ್ರಿ ಪದವಿ ನಿರಾಕರಿಸಿದ್ದಾರೆ ಕಣ್ರಮ್ಮಾ.”

ಮೋಹಿನಿ, ಸಾಹುಕಾರನ ಬಳಿ ಸರಿದು,

“ಒಂದು ಸಲ ನೀವು ಮಂತ್ರಿಯಾಗಿಬಿಡ್ರೀ, ನೀವು ಅಧಿಕಾರ ನಡೆಸುವುದನ್ನು ನಾನು ನೋಡಬೇಕು”

“ಮಂತ್ರಿಯಾದ ಮೇಲೆ ಅಧಿಕಾರ ನಡಸುವುದಕ್ಕಾಗುವುದಿಲ್ಲ ಮೋಹಿನಿ. ಮಂತ್ರಿ ಪದವಿ ಉಳಿಸಿಕೊಳ್ಳುವುದಕ್ಕೆ ಎಲ್ಲರಿಗೂ ಡೊಗ್ಗು ಸಲಾಮು ಹಾಕುತ್ತಿರಬೇಕು.”

“ಇಲ್ಲಾ ಸ್ವಾಮಿ. ಒಂದು ಸಲ ನೀವು ಮುಖ್ಯ ಮಂತ್ರಿಗಳಾಗಬೇಕು.”

“ಆಗ್ತೀನಿ ಕಣೋ- ಕಾಲ ಕಾಯ್ತಾ ಇದ್ದೀನಿ”

ಎಂದು ಸಾಹುಕಾರರು ಹೇಳಿದರು.

ತೂಕಡಿಸಲಾರಂಭಿಸಿದ್ದ ಲೋಕಾಭಿರಾಮ,

“ಊಟ ತರುವುದಕ್ಕೆ ಮಾದಯ್ಯನಿಗೆ ಹೇಳಲೇ ?”

ಸಾಹುಕಾರರ ಇಂಗಿತ ತಿಳಿದು ಮೋಹಿನಿ ಒಳಗೆ ಹೋದಳು.

“ಟೇಬಲ್ ಮೇಲೆ ಮುಚ್ಚಿಡು ಎಂದು ಮಾದಯ್ಯನಿಗೆ ಹೇಳು. ನೀನು ಊಟ ಮಾಡು. ಇಲ್ಲೇ ಇರ್ತೀಯೋ ಮನೆಗೆ ಹೋಗ್ತೀಯೋ?”

“ಈ ಸ್ಥಿತಿಯಲ್ಲಿ ನಡೆಯುವುದಕ್ಕೆ ಆಗುವುದಿಲ್ಲ. ಇಲ್ಲೇ ಇರ್ತೀನಿ. ಬೆಳಿಗ್ಗೆ ತೋಟದಪ್ಪನ ಛತ್ರಕ್ಕೆ ಹೋಗಬೇಕಲ್ಲಾ- ಆ ಕೆಲಸ ಮುಗಿಸಿಕೊಂಡು ಒಂದೇ ಸಲ ಮನೆಗೆ ಹೋಗ್ತೀನಿ.”

“ಹಾಗೇ ಮಾಡು”

ಎಂದು ಸಾಹುಕಾರರು ಒಳಗೆ ಹೋದರು.

ಅಂದಿನ ಟಪಾಲಿನಲ್ಲಿ ಮದರಾಸಿನಿಂದ ಬಂದಿದ್ದ 'ಕಲಾಕ್ಷೇತ್ರ'ದ ವರದಿ, ವಿವರಣೆ, ಪಾಠಕ್ರಮಸೂಚಿ, ಅಪ್ಲಿಕೇಷನ್ ಫಾರ್ಮ್ ಪರಾಮರ್ಶಿಸಿದ ಮೋಹಿನಿ, ತಾಯಿಯ ಬಳಿಗೆ ಹೋಗಿ,

"ಕಲಾಕ್ಷೇತ್ರದವರು ಅಪ್ಲಿಕೇಷನ್ ಕಳಿಸಿದ್ದಾರಮ್ಮ" ಎಂದಳು.

"ಈ ವರ್ಷ ಕಳೆದುಹೋಗಲಿ ಮೋಹಿನಿ. ಮುಂದಿನ ವರ್ಷ ಹೋದರಾಯಿತು."

"ಇಲ್ಲಮ್ಮ. ಕಾಲೇಜ್ ಓದಿನ ಮೇಲೆ ನನಗೆ ಸ್ವಲ್ಪವೂ ಮನಸ್ಸಿಲ್ಲ. ಮುಂದಿನ ವರ್ಷ ಎಂದರೆ ಆರು ತಿಂಗಳು ಅನ್ಯಾಯವಾಗಿ ಹೋಗುತ್ತದೆ. ನಾನು ಈಗಲೇ ಹೊರಟುಬಿಡುತ್ತೇನೆ."

"ತಿಂಗಳಿಗೆ ಖರ್ಚು ಎಷ್ಟು ಬರುತ್ತದೆ ಮೋಹಿನಿ."

"ಟ್ಯೂಷನ್ ಫೀಸ್ ನೂರು - ಹಾಸ್ಟಲ್ ಖರ್ಚು ನೂರು – ಇನ್ನೂರು."

"ಎಷ್ಟು ವರ್ಷ ?"

"ಮೂರು ವರ್ಷವಾದರೂ ನಾನು ಮದರಾಸಿನಲ್ಲಿರಬೇಕು."

ಅಂಬುಜಮ್ಮನವರು ಲೆಕ್ಕ ಹಾಕುತ್ತಾ,

"ವರ್ಷಕ್ಕೆ ಎರಡು ಸಾವಿರದ ನಾಲ್ಕು ನೂರು - ಮೂರು ವರ್ಷಕ್ಕೆ ಏಳುಸಾವಿರದಿನ್ನೂರು - ಇಷ್ಟು ಹಣ ನಾನು ಎಲ್ಲಿಂದ ತರಲಿ ಮೋಹಿನಿ."

"ಸ್ಕಾಲರ್‌ಷಿಪ್‌ಗೆ ನಾನು ಪ್ರಯತ್ನಿಸುತ್ತೇನಮ್ಮಾ, ತಿಂಗಳಿಗೆ ನೀನು ನೂರು ಕೊಟ್ಟರೆ ಸಾಕು. ಮದರಾಸಿನಲ್ಲಾಗುವ ಖರ್ಚನ್ನು ನಾನು ನಾಲ್ಕೈದು ಪ್ರದರ್ಶನಗಳಲ್ಲಿ ಸಂಪಾದಿಸುತ್ತೇನೆ."

"ಅಲ್ಲಿ ನೀನೊಬ್ಬಳು - ಇಲ್ಲಿ ನಾನೊಬ್ಬಳು!"

"ಈಗ ನಾನು ಮದರಾಸಿಗೆ ಹೋಗಿ ಹಾಸ್ಟಲ್‌ನಲ್ಲಿರುತ್ತೇನೆ. ಕೆಲವು ತಿಂಗಳಾದ ಮೇಲೆ ಮನೆ ಗೊತ್ತುಮಾಡಿ ಬರೆಯುತ್ತೇನೆ. ನೀನು ಈ ಮನೆ ಬಾಡಿಗೆಗೆ ಕೊಟ್ಟು ಮದರಾಸಿಗೇ ಬಂದುಬಿಡು."

"ನಾನು ಈ ಮನೆ ಬಿಟ್ಟು ಎಲ್ಲಿಗೂ ಬರುವುದಿಲ್ಲ ಮೋಹಿನಿ."

"ಅಪ್ಲಿಕೇಷನ್ ಕಳಿಸಲೇ ?"

"ಯೋಚಿಸಿನೋಡು. ಶರಾವತಿಯನ್ನು ಒಂದು ಮಾತು ಕೇಳು."

"ನಾನು ಯಾರನ್ನೂ ಕೇಳಬೇಕಾಗಿಲ್ಲಮ್ಮ. ಈ ಬಗ್ಗೆ ನಿರ್ಧಾರ ಮಾಡಿದ್ದೇನೆ."

“ನಿನ್ನಿಷ್ಟ.”

ಎಂದು ಅಂಬುಜನಮ್ಮ ನೊಂದು ನುಡಿದರು.

ಅಪ್ಲಿಕೇಷನ್ ತೆಗೆದುಕೊಂಡು ನೇರವಾಗಿ 'ದಿಲ್‌ರುಬಾ' ಬಂಗಲೆಗೆ ಬಂದ ಮೋಹಿನಿ, ಕಲಾಕ್ಷೇತ್ರದ ಸಾಹಿತ್ಯವನ್ನು ಸಾಹುಕಾರರ ಕೈಗಿತ್ತಳು.

ಸಾಹುಕಾರರು ಸಾಹಿತ್ಯವನ್ನು ಸಾವಕಾಶವಾಗಿ ಅವಲೋಕಿಸಿ,

“ನೀನು ಮದರಾಸಿಗೆ ಹೋಗಬೇಕು.”

“ಹೂ !”

“ಎಂದು ?”

“ನಾಳೆ ಸಾಧ್ಯವಾದರೆ ನಾಳೆಯೇ !”

“ಲೋಕಾಭಿ........”

ಎಂದು ಕೂಗಿದರು.

ಲೋಕಾಭಿರಾಮ ಓಡಿಬಂದು,

“ಏನು ಸ್ವಾಮಿ” ಎಂದ.

“ಆಫೀಸ್ ರೂಮ್ ಟೇಬಲ್ ಮೇಲೆ ನನ್ನ ಎಂಗೇಜ್‌ಮೆಂಟ್ ಪ್ಯಾಡ್ (Engagement Pad) ಇದೆ ತೆಗೆದುಕೊಂಡು ಬಾ.”

ಲೋಕಾಭಿರಾಮ ಪ್ಯಾಡ್ ತಂದುಕೊಡಲು, ಸಾಹುಕಾರರು ಅದನ್ನು ನೋಡುತ್ತಾ,

“ನಾಳೆ - ಗುರುವಾರ - ಸಾಧ್ಯವಿಲ್ಲ. ಕ್ಯಾಬಿನೆಟ್ ಮೀಟಿಂಗ್ ಇದೆ. ನಾಡಿದ್ದು - ಶುಕ್ರವಾರ - ಲೇಬರ್ ಕಾಲೋನಿ ಕಟ್ಟಡದ ಶಂಕುಸ್ಥಾಪನೆ ಒಪ್ಪಿಕೊಂಡಿದ್ದೇನೆ. ಶನಿವಾರ- ಹೊರಡಬಹುದು ಮೋಹಿನಿ.”

ಮೋಹಿನಿ ನಿಟ್ಟುಸಿರ್ಗರೆದು,

“ಸದ್ಯ - ಶನಿವಾರವೂ ಏನು ಬರುತ್ತದೋ ಎಂದಿದ್ದೆ.”

“ಶನಿವಾರ ಬೆಳಿಗ್ಗೆ ಇಲ್ಲಿಂದ ಹೊರಡೋಣ.”

“ನಾವೇ ಹೋಗುವುದರಿಂದ ಅಪ್ಲಿಕೇಷನನ್ನು ಏತಕ್ಕೆ ಪೋಸ್ಟ್‌ನಲ್ಲಿ ಕಳಿಸಲಿ.”

“ಅಗತ್ಯವಿಲ್ಲ - ಲೋಕಾಭಿ....”

“ಸ್ವಾಮೀ ............”

“ಮದರಾಸಿನ ’ರಾಯಲ್ ಲಾಡ್ಜ್’ಗೆ ಒಂದು ಟ್ರಂಕ್ ಕಾಲ್ (Trunk call) ಬುಕ್ ಮಾಡು.”

“ಯಾರಿಗೆ ಸ್ವಾಮಿ?”

“ಮ್ಯಾನೇಜರ್ ಸದಾಶಿವಂ- ಪಿ. ಪಿ. ಕಾಲ್ (Particular Person).”

“ತಾವೇ ಮಾತನಾಡುತ್ತೀರಾ?”

“ಬೇಕಿಲ್ಲ - ನೀನೇ ಮಾತನಾಡು, ಮೇಲುಗಡೆ ೧-೨ ರೂಮುಗಳನ್ನು ರಿಸರ್ವ್ ಮಾಡು ಎಂದು ಹೇಳು. ಹಾಗೆ ರೂಮ ಒಂದಕ್ಕೆ ಟೆಂಪೊರರಿ ಫೋನ್ ಇನ್‌ಸ್ಟಾಲ್ ಮಾಡಿಸು ಎಂದು ಹೇಳು.”

“ಅಲ್ಲೂ ನಿಮಗೆ ಫೋನ್ ಇರಬೇಕೇ?”

ಎಂದು ಮೋಹಿನಿ ಬೇಸರದಿಂದ ಕೇಳಿದಳು.

“ಇವತ್ತಿನ ವ್ಯವಹಾರಕ್ಕೆ ಇರುವುದು ಎರಡೇ ಬಂಡವಾಳ ಮೋಹಿನಿ. ಒಂದು ಕಾರು, ಒಂದು ಫೋನು.”

ಸಾಹುಕಾರರ ತೊಡೆಯೇರಿ ಕುಳಿತ ಮೋಹಿನಿ ಲಲ್ಲೆಗರೆಯುತ್ತ,

“ಮದರಾಸಿಗೆ ನಾನು ಹೋದ ಮೇಲೆ ನನ್ನನ್ನು ಮರೆತುಬಿಡುತ್ತೀರಾ ?”

“ನಿನ್ನನ್ನು ಮರೆಯುವ ಹಾಗಿದ್ದರೆ ನಾನೇಕೆ ಇಷ್ಟು ಕಷ್ಟಪಡಬೇಕಾಗಿತ್ತು.”

“ಮದರಾಸ್ ಸರ್ಕಾರ ತಮ್ಮ ಪಾರ್ಟಿಗಳಲ್ಲಿ ನನ್ನ ನೃತ್ಯ ಏರ್ಪಡಿಸುವಂತೆ ಮಾಡಿ.”

“ಈಗ ಬೇಡ - ಸ್ವಲ್ಪ ದಿನ ಹೋಗಲಿ, ನಾನು ಮದರಾಸಿನ ಮುಖ್ಯಮಂತ್ರಿಗಳಿಗೆ ಟ್ರಂಕ್ ಕಾಲ್ ಮಾಡಿ ತಿಳಿಸುತ್ತೇನೆ.”

“ನಾನು ನಿಮ್ಮೊಂದಿಗೆ ಅರ್ಜಂಟಾಗಿ (urgent) ಮಾತಾಡಬೇಕಾದರೆ ಎಲ್ಲಿಂದ ಫೋನ್ ಮಾಡಲಿ.”

“ರಾಯಲ್ ಲಾಡ್ಜ್‌ನಿಂದ ಮಾಡು. ನಾನು ಸದಾಶಿವಂಗೆ ಹೇಳಿರುತ್ತೇನೆ.”

“ನೀವು ವಾರಕ್ಕೊಮ್ಮೆಯಾದರೂ ಮದರಾಸಿಗೆ ಬರುತ್ತಿರಬೇಕು.”

“ಪ್ರತಿವಾರವೂ ಬರುವುದಕ್ಕಾಗುವುದಿಲ್ಲ ಮೋಹಿನಿ. ತಿಂಗಳಿಗೊಮ್ಮೆ ಖಂಡಿತ ಬರುತ್ತೇನೆ.”

ಮೋಹಿನಿ ಮೆಲ್ಲನೆ,

“ನನ್ನ ಖರ್ಚಿಗೆ........”

“ಪ್ರತಿ ತಿಂಗಳೂ ಹಣ ಕಳಿಸಿಕೊಡುತ್ತೇನೆ.”

ಎಂದು ವಿಚಾರಪರವಶರಾಗಿ ಕುಳಿತ ಸಾಹುಕಾರರು ಥಟ್ಟನೆ,

“ನಾನು ಕೆಟ್ಟವನಲ್ಲ ಮೋಹಿನಿ.”

“ನೀವು ಕೆಟ್ಟವರು ಎಂದು ಯಾರು ಹೇಳಿದರು.”

“ನೀನು ಪತ್ರಿಕೆಗಳನ್ನು ಓದುವುದಿಲ್ಲವೇ ?”

“ಕ್ರಮವಾಗಿ ಓದುವುದಿಲ್ಲ.”

“ಓದಿನೋಡು.”

“ಪತ್ರಿಕೆಗಳವರಿಗೆ ನಿಮ್ಮ ಮೇಲೇಕೆ ದ್ವೇಷ ?”

“ಅವರ ಶಿಷ್ಯರಿಗೆ ನಾನು ಉತ್ತೇಜನ ಕೊಡುವುದಿಲ್ಲವೆಂದು.”

“ನಿಮ್ಮದಾಗಿ ಒಂದು ಪತ್ರಿಕೆ ಏಕೆ ಆರಂಭಿಸಬಾರದು – ಹೇಗೂ ಲೋಕಾಭಿರಾಮ ಇದ್ದಾರೆ.”

“ಈ ಮುಠ್ಠಾಳನಿಗೆ ಏನು ಬರುತ್ತೆ - ಇವನು ಅಡ ಚಾಕರಿಗೆ ಸರಿ ಅಷ್ಟೇ ?”

ಹೊರಬಾಗಿಲಲ್ಲಿ ನಿಂತು ಲೋಕಾಭಿರಾಮ ಕೆಮ್ಮಲು ಮೋಹಿನಿ ಸಾಹುಕಾರರ ತೊಡೆಯಿಂದ ಕೆಳಗಿಳಿದು ಸೋಫಾ ಮೇಲೆ ಕುಳಿತಳು.

“ಬಾ. ಲೋಕಾಭಿ”

ಲೋಕಾಭಿರಾಮ ಒಳಗೆ ಬಂದು,

“ಕಾಲ್ (call) ಸಿಕ್ಕಿತು ಸ್ವಾಮಿ - ಸದಾಶಿವಂ ಜತೆ ಮಾತನಾಡಿದೆ.”

“ಫೋನ್ ವಿಷಯ ಹೇಳಿದೆಯೇನೋ?”

“ಹೇಳಿದೆ ಸ್ವಾಮಿ. ಈಗ ಪ್ರತಿ ರೂಮಿನಲ್ಲೂ ಫೋನ್ ಹಾಕಿಸಿದ್ದಾರಂತೆ.”

“ಒಳ್ಳೆಯದಾಯಿತು - ಗುಂಡಿನ ವಿಷಯ?”

“ಕೇಳಿದೆ. ವೇಲಾಯುಧನ ಹತ್ತಿರ ಬೇಕಾದ್ದು ಸಿಕ್ಕತ್ತೆ ಎಂದರು.”

“ಸರಿ”

ಎಂದು ಮೋಹಿನಿಯ ಕಡೆ ತಿರುಗಿ,

"ಶುಕ್ರವಾರ ರಾತ್ರಿ ನೀನು ಇಲ್ಲಿಗೇ ಬಂದುಬಿಡು ಮೋಹಿನಿ – ನಿನ್ನ ಸಾಮಾನು ತೆಗೆಸಿಕೊಂಡು ಶನಿವಾರ ಬೆಳಿಗ್ಗೆ ಒಟ್ಟಿಗೆ ಇಲ್ಲಿಂದಲೇ ಹೊರಡೋಣ"

ಆ ಸಲಹೆಯನ್ನು ಮೋಹಿನಿ ಅಂಗೀಕರಿಸಿದಳು.

## ೮

ಶನಿವಾರ ಬೆಳಿಗ್ಗೆ ಐದು ಗಂಟೆಗೇ ಹೊರಡತಕ್ಕದ್ದೆಂದು ಸಾಹುಕಾರರು ಹೇಳಿದ್ದರು.

ಆದರೆ ಎಂಟು ಗಂಟೆಯವರೆಗೆ ಅವರಿಗೇ ಪುರಸತ್ತಾಗಲಿಲ್ಲ.

ಸಾಹುಕಾರರೇ ಸ್ಟೀರಿಂಗ್ ವ್ಹೀಲ್ (Steering wheel) ಬಳಿ ಕುಳಿತರು. ಮೋಹಿನಿ ಅವರ ಪಕ್ಕದಲ್ಲಿ ಕುಳಿತಳು, ಲೋಕಾಭಿರಾಮ, ಸಿದ್ದಪ್ಪ ಹಿಂದಿನ ಸೀಟಿನಲ್ಲಿ ಕುಳಿತರು.

"ಪೆಟ್ರೋಲ್ ಎಷ್ಟು ಹಾಕಿಸಿದ್ದೀ ಸಿದ್ದೂ"

"ಹತ್ತು ಗ್ಯಾಲನ್ ಹಾಕಿಸಿದ್ದೀನಿ ಸ್ವಾಮಿ"

"ಆಯಲ್ (oil) ಹಾಕಿಸಿದೆಯಾ?"

"ಹಾಕಿಸಿದ್ದೀನಿ ಸ್ವಾಮಿ."

ಕಾರು ಊರಿನ ಗಡಿ ದಾಟಲು ಸಾಹುಕಾರರು,

"ಚಿತ್ತೂರಿನಲ್ಲಿ ಊಟ ಮಾಡೋಣವೇ ಮೋಹಿನಿ."

"ಮದರಾಸಿಗೆ ಎಷ್ಟು ಹೊತ್ತಿಗೆ ಹೋಗುತ್ತೇವೆ."

"ಒಂದೂವರೆ - ಎರಡಾಗಬಹುದು."

"ಸ್ನಾನಮಾಡಿ ಮದರಾಸಿನಲ್ಲೇ ಊಟ ಮಾಡೋಣ."

ಸಾಹುಕಾರರು ಚಿತ್ತೂರಿನಲ್ಲಿ ಕಾರು ನಿಲ್ಲಿಸಿ, ಅದಕ್ಕೆ ತಣ್ಣೀರು ಹಾಕಿಸಿ, ಎಲ್ಲರಿಗೂ ಕಾಫಿ ತರಿಸಿದರು.

ಕಾಫಿ ಸೇವನೆ ಮುಗಿಯಲು ಸಾಹುಕಾರರು,

"ನೀನೇ ಡ್ರೈವ್ ಮಾಡು ಸಿದ್ದೂ"

ಎಂದು ಮೋಹಿನಿಯೊಡನೆ ಹಿಂದಿನ ಸೀಟಿಗೆ ಬಂದು ಕುಳಿತರು.

ಲೋಕಾಭಿರಾಮ, ಡ್ರೈವರ್ ಪಕ್ಕದಲ್ಲಿ ಮುಂದಿನ ಸೀಟಿನಲ್ಲಿ ಕುಳಿತ.

ಎರಡು ಗಂಟೆಯ ವೇಳೆಗೆ ಕಾರು ಮದರಾಸಿನ 'ರಾಯಲ್ ಲಾಡ್ಜ್' ತಲುಪಿತು.

ಹೊರಗೇ ನಿಂತಿದ್ದ ಬ್ರೋಕರ್ ಕರ್ಪ, ಆಫೀಸಿಗೆ ಹೋಗಿ ಸುದ್ದಿ ಮುಟ್ಟಿಸಲು, ಸದಾಶಿವಂ ಧಾವಿಸಿ ಬಂದು,

"ಬರಬೇಕು - ಬರಬೇಕು"

ಎಂದು ಹಾರ್ದಿಕವಾಗಿ ಸ್ವಾಗತಿಸಿದ.

ಸಾಹುಕಾರರು, ಮೋಹಿನಿ ಸದಾಶಿವಂ ಜತೆಯಲ್ಲಿ ಮಹಡಿಯೇರಿ ಹೋದರು.

ಸದಾಶಿವಂ ಒಂದನೆಯ ನಂಬರು ರೂಮಿನ ಬಾಗಿಲು ತೆಗೆದು,

"ತಮ್ಮ ರೂಮೇ ರಿಸರ್ವ್ ಮಾಡಿಸಿದ್ದೇನೆ."

"ಥ್ಯಾಂಕ್ಸ್ ಸದಾಶಿವಂ."

ಎಂದು ಮೇಜಿನ ಕಡೆ ನೋಡಿ, ಪ್ರಸನ್ನವದನರಾಗಿ,

"ಎಲ್ಲಾ ರೆಡಿ (Ready) ಮಾಡಿಸಿದ್ದೀರಿ."

"ನಿಮ್ಮ ಕಾಲ ಎಷ್ಟು ಅಮೌಲ್ಯವಾದುದೆಂದು ನನಗೆ ಗೊತ್ತಿಲ್ಲವೇ ಸಾರ್."

ಲೋಕಾಭಿರಾಮ ಸಾಮಾನುಗಳನ್ನು ಲಾಡ್ಜಿನ ಸೇವಕರಿಂದ ಹೊರಸಿಕೊಂಡು ಒಳಗೆ ಬಂದ.

"ಇವನಿಗೆ ಎರಡನೆಯ ನಂಬರ್ ರೂಮ ಕೊಡಿ ಸದಾಶಿವಂ"

ಲೋಕಾಭಿ ಸಾಹುಕಾರರ, ಮೋಹಿನಿಯ ಸಾಮಾನುಗಳನ್ನು ಟೀಪಾಯ್ ಮೇಲಿಟ್ಟು, ತನ್ನ ಚೀಲ ಕೈಗೆತ್ತಿಕೊಂಡು,

"ಸ್ನಾನ ಮಾಡಿಕೊಂಡು ಬರುತ್ತೇನೆ" ಎಂದ.

"ನಿನ್ನ ಸ್ನಾನ ಇರಲಿ - ಸಾಮಾನು ರೂಮಿನಲ್ಲಿ ಹಾಕಿ ಇಲ್ಲಿ ಬಾ."

ಲೋಕಾಭಿರಾಮ ಹೊರಗೆ ಹೋಗಲು ಸದಾಶಿವಂ,

"ಊಟ ಎಷ್ಟು ಹೊತ್ತಿಗೆ ಕಳಿಸಲಿ ?"

ಎಂದು ಕೇಳಿದ.

"ರೂಮ್ ಬಾಯ ಹೊರಗಿರಲಿ- ಅವನ ಕೈಲಿ ಹೇಳಿ ಕಳಿಸುತ್ತೇನೆ. ಮೊದಲು ನಮ್ಮ ಡ್ರೈವರಿಗೆ ಊಟ ಹಾಕಿಬಿಡಿ ಸದಾಶಿವಂ."

ಸದಾಶಿವಂ ಹೊರಗೆ ಹೋಗಲು, ಮೋಹಿನಿ ತನ್ನ ಟ್ರಂಕ್ ತೆಗೆದು, ಅದರೊಳಗಿದ್ದ ಟವಲು, ಸೋಪ್ ಬಾಕ್ಸ್, ಟಾಯಿಲೆಟ್ ಸೆಟ್, ಸೀರೆ ತೆಗೆದುಕೊಂಡು,

"ನಾನು ಸ್ನಾನ ಮಾಡಿಬಿಡುತ್ತೇನೆ" ಎಂದಳು

ಸಾಹುಕಾರರು ಮಾರುತ್ತರ ಕೊಡದೆ ಮೇಜಿನ ಮೇಲಿದ್ದ ಪರಿಕರಗಳ ಕಡೆಗೆ ಕೈ ತೋರಿಸಿದರು.

“ನೀವು ಆರಂಭಿಸಿ - ನಾನು ಬಂದು ಸೇರಿಕೊಳ್ಳುತ್ತೇನೆ.”

ಮೋಹಿನಿ ಮೇಜಿನ ಬಳಿಗೆ ಬಂದು, ಅಲ್ಲಿದ್ದ ಶೀಷೆಗಳನ್ನೆತ್ತಿಕೊಂಡು ನೋಡಿ,

“ಎಕ್. ಷಾ ನಂಬರ್ ೧- ಡಿಂಪಲ್ ಸ್ಕಾಚ್ - ಜಾನಿವಾಕರ್ - ಇವುಗಳೆಲ್ಲಾ ಮದರಾಸಿನಲ್ಲಿ ಸಿಕ್ಕುತ್ತವೆಯೇ ?”

“ಬೆಂಗಳೂರಿನಲ್ಲಿ ಸಿಕ್ಕದಿರುವುದೆಲ್ಲಾ ಇಲ್ಲಿ ಸಿಕ್ಕುತ್ತದೆ.”

“ಕಾಂಗ್ರಸ್ಸಿನವರು ಪ್ರೊಹಿಬಿಷನ್ ಜಾರಿ ಮಾಡಿದ್ದೇನು – ಮಣ್ಣು.”

ಸಾಹುಕಾರರು ನಕ್ಕು,

“ಹೋಗು - ಬೇಗ ಸ್ನಾನ ಮುಗಿಸಿ ಬಾ”

ಎಂದರು.

ಮೋಹಿನಿ ಸ್ನಾನಗೃಹಕ್ಕೆ ಹೋಗಲು, ಸಾಹುಕಾರರು,

“ರೂಮ ಬಾಯ್” ಎಂದು ಕೂಗಿದರು.

ಹೊರಗಿದ್ದ ರೂಮ್ ಬಾಯ ಒಳಗೆ ಬಂದು,

“ಏನು ಸಾರ್” ಎಂದ.

“ಪಕ್ಕದ ರೂಮಿನಲ್ಲಿ ನಮ್ಮ ಲೋಕಾಭಿರಾಮ ಇದ್ದಾನೆ-ಕರಿ.”

ರೂಮ್ ಬಾಯ್ ಹೊರಗೆ ಹೋಗಿ ಜತೆಯಲ್ಲಿಯೇ ಲೋಕಾಭಿರಾಮನನ್ನು ಕರೆದುಕೊಂಡು ಬಂದ,

ಲೋಕಾಭಿರಾಮ ಸುತ್ತಲೂ ನೋಡಿ,

“ಅಮ್ಮಾವರೆಲ್ಲಿ?” ಎಂದು ಕೇಳಿದ.

“ಸ್ನಾನ ಮಾಡುತ್ತಿದ್ದಾಳೆ.”

“ನಾನೂ ಸ್ನಾನ ಮಾಡಬೇಕಲ್ಲ ಸ್ವಾಮಿ.”

“ಇರಲಿ. ಕುಕ್ಕರಿಸೋ - ಗ್ಲಾಸುಗಳು ತೊಗೋ - ರೂಮ್ ಬಾಯಗೆ ಹೇಳಿ ಖಾರದ ತಿಂಡಿ ತರಿಸು.”

ಲೋಕಾಭಿರಾಮ ಹೊರಗೆ ಹೋಗಿ ರೂಮ್ ಬಾಯ್‌ಗೆ ಹೇಳಿ ಬಂದು, ಎರಡು ಗ್ಲಾಸುಗಳಿಗೆ ಡಿಂಪಲ್ ಸ್ಕಾಚ್ ಹಾಕಿ, ಸ್ವಲ್ಪ ಸ್ವಲ್ಪ ಸೋಡಾ ಬೆರಸಿದ.

ಸಾಹುಕಾರರು ಅರ್ಧ ಗ್ಲಾಸ್ ಮುಗಿಸಿ, ನಾಲಗೆಯಿಂದ ತುಟಿ ಸವರಿಕೊಳ್ಳುತ್ತಾ,

“ಒಳ್ಳೆಯ ಸ್ಕಾಚ್ ಮುಂದೆ ಯಾವದೂ ಇಲ್ಲ ಲೋಕಾಭಿ” ಎಂದರು.

ತನ್ನ ಗ್ಲಾಸ್ ಬರಿದು ಮಾಡಿ ಮೇಜಿನ ಮೇಲಿಟ್ಟ ಲೋಕಾಭಿ,

“ಮೋಹಿನಿಯವರು ಬೆಂಗಳೂರಿನಲ್ಲೇ ಡ್ಯಾನ್ಸ್ ಕಲಿತಿದ್ದರೆ ಚೆನ್ನಾಗಿತ್ತು” ಎಂದ.

“ಏಕೆ ಲೋಕಾಭಿ.”

“ಏಕೆಯೆಂದು ಹೇಳಲಿ ಸ್ವಾಮಿ. ನಿಮಗೆ ತಿಳಿಯದೆ ಇರುವುದು ಯಾವದಿದೆ ?”

“ಇರಲಿ ಬಾಯಿಬಿಟ್ಟು ಹೇಳಯ್ಯಾ”

“ವಯಸ್ಸು ಎಂಥಾವರನ್ನೂ ತಪ್ಪು ದಾರಿ ತುಳಿಸುತ್ತದೆ ಸ್ವಾಮಿ- ನೀವೂ ಎದುರಿಗಿರುವುದಿಲ್ಲ........”

ಸಾಹುಕಾರರು ನಕ್ಕು,

“ದಡ್ಡಾ - ನಾನು ಮೂಢ ಎಂದು ತಿಳಿದುಕೊಂಡಿರುವೆಯಾ ? ಕಾಡಬೆಳದಿಂಗಳು ಸ್ಥಿರವಲ್ಲವೆಂದು ನನಗೆ ಗೊತ್ತಿಲ್ಲವೇ? ನಡೆದಷ್ಟು ದಿನವೇ ನಾಣ್ಯ, ಜೀವಾವಧಿ ಇವಳನ್ನು ಗಂಟುಹಾಕಿಕೊಳ್ಳಬೇಕೆಂದು ನನಗೆ ಇಷ್ಟವೂ ಇಲ್ಲ.”

“ಗಂಟು ಹಾಕಿಕೊಂಡಿದ್ದೀರಿ.- ಮೋಹಿನಿಯ ಉದ್ದಕ್ಕೂ ಹಣ ಸುರಿಯುತ್ತಿದ್ದೀರಿ.”

“ಇಂಥವರಿಗಾಗಿ ಹಣ ಖರ್ಚು ಮಾಡಲು ನನಗೆ ಇಷ್ಟ ಕಣೋ.”

ರೂಮ್ ಬಾಯ್ ಬಂದು, ಮೇಜಿದ ಮೇಲೆ ಖಾರದ ತಿಂಡಿ ತಟ್ಟೆಯಿಟ್ಟ.

“ಇವನು ಮಂಗಳೂರಿನವನು ಸ್ವಾಮಿ - ಹೆಸರು ಮುಕುಂದ – ಬಹಳ ಒಳ್ಳೆಯ ಹುಡುಗ.”

ಸಾಹುಕಾರರು ಗಂಭೀರವಾಗಿ,

“ಒಳ್ಳೆಯದು” ಎಂದರು.

ಮುಕುಂದ ಸಾಹುಕಾರರಿಗೆ ನಮಸ್ಕಾರ ಮಾಡಿ ಹೊರಗೆ ಹೋದ,

ಲೋಕಾಭಿರಾಮ ಹಲ್ಲುಗಿಂಜುತ್ತ,

“ಇವತ್ತು... ನನಗೆ...”

“ಏನಾಗಬೇಕು? ’ಸ್ತ್ರೀರಾಮ’ನೇ !”

“ಅದಿದ್ದೇ ಇದೆ ಬಿಡಿ - ನನಗೂ ಒಂದು...”

ಎಂದು ಅಭಿನಯಿಸಿ ತೋರಿಸಲು ಸಾಹುಕಾರರು ನಗುತ್ತ,

"ಇಲ್ಲಿ ಯಾರಾದರೂ ನಿನಗೆ ಗುರುತೇನು ?"

"ಗುರುತಿಗೇನು - ಗುರುತು ಮಾಡಿಕೊಂಡರಾಯಿತು"

"ಏನು ಮಾಡುತ್ತೀ ಹೇಳು."

"ನಾವು ಹೋಟಲಿಗೆ ಬಂದಾಗ, ಸದಾಶಿವಂ ಜತೆ ಒಬ್ಬ ಕರಿಯ ಬಂದನಲ್ಲಾ ಅವನು ಬ್ರೋಕರ್ . ಎಲ್ಲಾ ವ್ಯವಸ್ಥೆ ಮಾಡುತ್ತಾನೆ."

"ಇಷ್ಟು ಬೇಗ ಹೇಗೆ ಪತ್ತೆ ಮಾಡಿದೆಯೋ ?"

"ನಮ್ಮೂರ ದಾಖಲು - ಮುಕುಂದ ಇದ್ದಾನಲ್ಲಾ !"

"ಅಸಾಧ್ಯದ ಬಡ್ಡೀಮಗ ಕಣೋ ನೀನು - ಏನು ಬೇಕೋ ಮಾಡಿಕೋ-ಗಲಾಟೆಯಾಗದಂತೆ ಹುಷಾರಾಗಿರು."

ಸ್ನಾನಗೃಹದ ಬಾಗಿಲು ಶಬ್ದವಾಗಲು ಲೋಕಾಭಿರಾಮ,

"ಮೋಹಿನಿ ಬರುತ್ತಿದ್ದಾರೆ"

ಎಂದು ಎಚ್ಚರಿಸಿದ.

ಮೋಹಿನಿ ಶುಭ್ರಸ್ನಾತಳಾಗಿ, ಸ್ನಾನಗೃಹದಲ್ಲಿಯೇ ವಸ್ತ್ರ ಬದಲಿಸಿಕೊಂಡಿದ್ದಳು. ಅವಳನ್ನು ದಿಟ್ಟಿಸಿ ನೋಡಿದ ಸಾಹುಕಾರರು,

"ನಾವು ಸುರುಮಾಡಿಬಿಟ್ಟೆವು ಮೋಹಿನಿ."

"ಪರವಾಗಿಲ್ಲ - ನಾನೇ ಹೇಳದ್ದೆನಲ್ಲಾ !"

"ಚೆನ್ನಾಗಿ ಸ್ನಾನವಾಯಿತೇ"

"ಆಯಿತು- ಆಯಾಸ ಪರಿಹಾರವಾಯಿತು !"

"ಇಷ್ಟು, ಬೇಗ !"

ಎಂದು ಸಾಹುಕಾರರು ನಕ್ಕರು.

"ನೀವೂ ಸ್ನಾನ ಮಾಡಿದ್ದರೆ ಚೆನ್ನಾಗಿತ್ತು."

"ಆಮೇಲೆ ಮಾಡುತ್ತೇನೆ. . ಲೋಕಾಭಿ, ಗ್ಲಾಸ್ ಭರ್ತಿ ಮಾಡು" ಎಂದರು.

ಸಂಜೆಯವರೆವಿಗೂ ಪಾನ ಸಮಾರಂಭವೇ ಮುಂದುವರಿಯಿತು.

ಲೋಕಾಭಿ ಎದ್ದು ಹೊರಗೆ ಹೋಗಲು, ಮುಕುಂದ ತಂದಿಟ್ಟಿದ್ದ ಊಟದಲ್ಲಿ ಸಾಹುಕಾರರು, ಮೋಹಿನಿ ಸ್ವಲ್ಪ ಸ್ವಲ್ಪ ಉಂಡು ವಿಶ್ರಾಂತಿಗೆ ತೆರಳಿದರು.

# ೬

ಸಾಹುಕಾರರು ಏಳುವ ಹೊತ್ತಿಗೇ ಕತ್ತಲೆ ಮಸುಕಿತ್ತು.

ಕಣ್ಣು ಬಿಟ್ಟು ಮೆಲ್ಲನೆ,

"ಮೋಹಿನಿ, ಗಂಟೆಯೆಷ್ಟು ನೋಡು" ಎಂದರು.

"ಏಳೂವರೆ."

"ಎಷ್ಟು ಹೊತ್ತು ಮಲಗಿಬಿಟ್ಟೆ."

ಎಂದು ಮೇಲಕ್ಕೆದ್ದು

"ಇನ್ನೇನು ಇನತ್ತಿನ ಕೆಲಸ ಮುಗಿದಂತೆ ಆಯಿತು. ಸುಮ್ಮನೆ ವಿಸ್ಕಿ ಮುಂದುವರಿಸುವುದೇ ಒಳ್ಳೆಯದು."

"ಸ್ನಾನಮಾಡಿ - ಜಡತ್ವ ಪರಿಹಾರವಾಗತ್ತೆ. ಆಮೇಲೆ ಸ್ವಲ್ಪ ಹೊತ್ತು ಬೀಚಿನ ಕಡೆ ಹೋಗಿ ಬರೋಣ."

ಎಂದು ಸಾಹುಕಾರರ ಹೆಗಲ ಮೇಲೆ ಒಂದು ಟವಲು ಹಾಕಿದಳು.

ಸಾಹುಕಾರರು ಸ್ನಾನ ಮುಗಿಸಿಕೊಂಡು ಬರುವಷ್ಟರಲ್ಲಿ ಮೋಹಿನಿ ಅಲಂಕಾರ ಮಾಡಿಕೊಂಡು ಹೊರಗೆ ಹೊರಡಲು ಅಣಿಯಾಗಿದ್ದಳು.

ಸಾಹುಕಾರರು ಬಟ್ಟೆ ಧರಿಸಿಕೊಂಡು,

"ಮುಕುಂದಾ" ಎಂದರು.

ಮುಕುಂದ ಬಂದು,

"ಏನು ಸ್ವಾಮಿ" ಎಂದ

"ಡ್ರೈವರಿಗೆ ಕಾರು ತೆಗೆದುಕೊಂಡು ಬಾ ಎಂದು ಹೇಳು. ಲೋಕಾಭಿರಾಮನನ್ನು ಕರಿ."

ಲೋಕಾಭಿರಾಮ ಬರಲು ಸಾಹುಕಾರರು,

"ನಾವು ಬೀಚಿಗೆ ಹೋಗುತ್ತಿದ್ದೇವೆ. ನೀನೂ ಬರುತ್ತೀಯಾ ಲೋಕಾಭಿ."

"ಬರುತ್ತಿದ್ದೆ. ಆದರೆ... ಸ್ವಲ್ಪ ಹೊರಗೆ ಬನ್ನಿ ಸ್ವಾಮಿ"

ಎಂದು ಸಾಹುಕಾರರನ್ನು ಹೊರಗೆ ಕರೆದೊಯ್ದು

"ಏರ್ಪಾಟು ಮಾಡಿಕೊಂಡಿದ್ದೇನೆ."

“ಬಂದಿದೆಯೇ ?”

“ಕರ್ಪ ಕರೆದುಕೊಂಡು ಬರುವುದಕ್ಕೆ ಹೋಗಿದ್ದಾನೆ.”

“ಸರಿ, ನೀನು ಇಲ್ಲೇ ಇರು, ನಾವು ಹೊರಗೆ ಹೋಗಿ ಬರುತ್ತೇವೆ.”

“ಒಳೆಯದು ಸ್ವಾಮಿ.”

ಎಂದವನು ದೇಶಾವಾರದ ನಗೆ ಬೀರಲು,

“ಇನ್ನೇನು ?”

“ತಮ್ಮ ರೂಮಿನ ಬೀಗದಕ್ಕೈ ಕೊಟ್ಟಿದ್ದರಾಗಿತ್ತು.”

“ಏಕೆ?”

“ನಾನೂ ನನ್ನ ಫ್ರೆಂಡೂ ಸ್ವಲ್ಪ ’ಸ್ತ್ರೀರಾಮ’ನನ್ನು ಹಾಕುತ್ತೇವೆ.”

“ನೀನೇ ಬೀಗ ಹಾಕಿಕೊಂಡು, ಬೀಗದಕ್ಕೆ ನಿನ್ನ ಹತ್ತಿರವೇ ಇಟ್ಟುಕೊಂಡಿರು.”

ಮುಕುಂದ ಬಂದು,

“ಕಾರ್ - ರೆಡಿಯಾಗಿದೆ ಸಾರ್” ಎಂದ.

ಸಾಹುಕಾರರು, ಮೋಹಿನಿಯೊಂದಿಗೆ ಕೆಳಗಿಳಿದು ಹೋಗಿ ಕಾರಿನಲ್ಲಿ ಕುಳಿತರು.

ಕಾರು, ರಾಯಲ್ ಲಾಡ್ಜಿನ ಆವರಣ ಬಿಟ್ಟು ಹೊರಗೆ ಬಂದೊಡನೆಯೇ ಮೋಹಿನಿ,

“ಅದೇನು ಲೋಕಾಭಿರಾಮಯ್ಯ ನಿಮ್ಮನ್ನು ಹೊರಗೆ ಕರೆದುಕೊಂಡು ಹೋಗಿ ಹೇಳಿದ್ದು?”

“ಅದೇ...”

ಎಂದು ಸಾಹುಕಾರರು ನಗಲಾರಂಭಿಸಿದರು.

“ನಗಬೇಡಿ - ಹೇಳಿ.”

“ಹೋಗಲಿ ಬಿಡೇ - ಅದು ಯಾವ ದೊಡ್ಡ ವಿಷಯ...”

“ನೀವು ಹೇಳುತ್ತೀರೋ ಇಲ್ಲವೋ ?”

ಸಾಹುಕಾರರು ನಗುತ್ತಲೇ,

“ರಾತ್ರಿಗೆ ಅವನೊಂದು ಏರ್ಪಾಟು ಮಾಡಿಕೊಂಡಿದ್ದಾನೆ. ನನ್ನ ರೂಮಿನಿಂದ ಸ್ವಲ್ಪ ಗುಂಡು ತೆಗೆದುಕೊಳ್ಳುತ್ತೇನೆಂದ - ಆಗಲಿ ಎಂದೆ – ಅಷ್ಟೇ!”

“ನಾನು ಬರದಿದ್ದರೆ ನೀವೂ.......”

“ಅದನ್ನೆಲ್ಲಾ ಕೇಳಬಾರದು ಮೋಹಿನಿ. ನಾನು ಏಕಪತ್ನಿವ್ರತಸ್ಥನಲ್ಲ ಎನ್ನುವುದು ಲೋಕಕ್ಕೇ ಗೊತ್ತಿದೆ.”

“ಹೋಗಲಿ ಬಿಡಿ.” ಎಂದಳು

ಇಬ್ಬರೂ ಬಂದು ಮೆರೀನಾ ಬೀಚ್ ನಲ್ಲಿ (Marina Beach) ಕುಳಿತರು.

ನೀಲಸಾಗರದ ಪ್ರಗಾಢ, ಪ್ರಚಂಡ ಸೌಂದರ್ಯ ಕಂಡು ಪ್ರಭಾವಿತಳಾದ ಮೋಹಿನಿ,

“ಸಾಗರ ಇಷ್ಟು ಸುಂದರವಾಗಿರುತ್ತದೆಯೆಂಬ ಕಲ್ಪನೆಯೇ ನನಗಿರಲಿಲ್ಲ.”

“ಇದುನರೆಗೆ ನೀನು ಸಮುದ್ರ ನೋಡಿಯೇ ಇರಲಿಲ್ಲವೇ ?”

“ಇಲ್ಲ. ಚಿಕ್ಕ ವಯಸ್ಸಿನಲ್ಲಿ ನನ್ನ ತಂದೆ ತಾಯಿ ನನ್ನನ್ನು ಮದರಾಸಿಗೆ ಕರೆತಂದಿದ್ದರಂತೆ ನೆನಪಿಲ್ಲ.”

“……………”

“ಸಮುದ್ರದ ವೈಶಾಲ್ಯ, ಬಾಹುಳ್ಯ ಅಗಾಧವಾದದ್ದು.”

“……………..”

“ನಿಮ್ಮ ಮನಸ್ಸಿನಂತೆ…”

“ಯಾವದು ನನ್ನ ಮನಸ್ಸಿನಂತೆ ?”

“ಸಮುದ್ರದ ವೈಶಾಲ್ಯ.”

“ನಿನಗಿನ್ನೂ ನನ್ನ ವಿಷಯ ಗೊತ್ತಿಲ್ಲ ಮೋಹಿನಿ”

“ಗೊತ್ತಿರುವಷ್ಟು ಸಾಕು - ಹೆಚ್ಚು ತಿಳಿಯಲು ನನಗೆ ಇಷ್ಟವಿಲ್ಲ.”

“ಅದು ನಿಜ - ಕೆಲವು ಸಲ ಹೆಚ್ಚು ತಿಳುವಳಿಕೆ ಹೆಚ್ಚು ದುಃಖಕ್ಕೆ ಕಾರಣವಾಗುತ್ತದೆ.”

ಬೀಚಿನ ವಾತಾವರಣ, ಸಮುದ್ರದ ಉಜ್ಜ್ವಲ ವೈಭವ ಇಬ್ಬರನ್ನೂ ಮೌನಿಗಳನ್ನಾಗಿಸಿತು.

ಸಾಹುಕಾರರ ಸಮೀಪಕ್ಕೆ ಸರಿದ ಮೋಹಿನಿ, ಮೆಲ್ಲನೆ ಅವರ ಕೈಯನ್ನು ತನ್ನ ಕೈಗೆ ತೆಗೆದುಕೊಂಡು,

“ನಾನು ನಿಮ್ಮವಳು….” ಎಂದಳು.

“ಸಂದೇಹವೇನು ?”

“ನನ್ನ ಶ್ರೇಯಸ್ಸು ನಿಮಗೆ ಸೇರಿದ್ದು.”

“ಅದರ ಜವಾಬ್ದಾರಿ ನಾನು ಹೊತ್ತುಕೊಂಡಿದ್ದೇನೆ.”

“ನಿಮ್ಮ ಸುಖ ನನಗೆ ಸೇರಿದ್ದು - ಅದರ ಜವಾಬ್ದಾರಿ ನಾನು ಹೊತ್ತುಕೊಂಡಿದ್ದೇನೆ.”

“ಅದು ಬಹಳ ದೊಡ್ಡ ಜವಾಬ್ದಾರಿ ಮೋಹಿನಿ.”

“ಚಿಂತೆಯಿಲ್ಲ.”

“ನನ್ನ ಕಷ್ಟ...”

“ನಿಮಗೂ ಕಷ್ಟವೇ?”

“ಸಣ್ಣವರಿಗೆ ಸಣ್ಣ ಕಷ್ಟ - ದೊಡ್ಡವರಿಗೆ ದೊಡ್ಡ ಕಷ್ಟ !”

“ನಿಮ್ಮ ಕಷ್ಟವೂ ನನಗಿರಲಿ.”

“ನೀನು ನೃತ್ಯ ಕಲಿತದ್ದು ಸಾಕು ಎಂದು ನಾನು ಹೇಳಿದರೆ ಏನು ಮಾಡುತ್ತೀ ಮೋಹಿನಿ.”

“ಹಾಗೆ ಹೇಳುವಿರಾ ?”

“ಒಂದು ವೇಳೆ ಹೇಳಿದರೆ?”

“ನಿಮ್ಮ ಪರಿಚಯವಾಗುವವರೆಗೆ ನೃತ್ಯವೇ ನನ್ನ ಸರ್ವಸ್ವವಾಗಿತ್ತು.”

“ಈಗ ?”

“ನೀವು ನನ್ನ ಸರ್ವಸ್ವ - ನಿಮಗಾಗಿ ನಾನು ನೃತ್ಯಾಭ್ಯಾಸವನ್ನೂ ಬಿಡಲು ಸಿದ್ಧಳಾಗಿರುವೆನು.”

“ನಿನ್ನ ವಿಶ್ವಾಸಕ್ಕೆ ನಾನು ಋಣಿ.”

“ಯಾವ ಕಾಲಕ್ಕೂ ನನ್ನ ಕೈ ಬಿಡಬೇಡಿ.”

“ಇಲ್ಲ.”

“ನಾಳೆ ಅಸೂಯಾಗ್ರಸ್ತರು ನನ್ನ ಮೇಲೆ ಇಲ್ಲಸಲ್ಲದ ಚಾಡಿ ಹೇಳಬಹುದು.”

“ನನಗೆ ಹಿತ್ತಾಳೆ ಕಿವಿಯಿಲ್ಲ. ಎಲ್ಲರೂ ನನ್ನ ಮಾತು ಕೇಳಬೇಕೇ ವಿನಾ ನಾನು ಯಾರ ಮಾತನ್ನೂ ಕೇಳುವುದಿಲ್ಲ.”

ಝುಗ್ಗನೆದ್ದು ನಿಂತ ಮೋಹಿನಿ,

“ಏಳಿ - ರೂಮಿಗೆ ಹೋಗೋಣ.”

“ಇಷ್ಟು ಬೇಗ ?”

“ಹೂ - ಹೀಗೆ ದೂರ ಕುಳಿತಿರಲು ನನಗೆ ಸಾಧ್ಯವಿಲ್ಲ.”

ಸಾಹುಕಾರರು ಮರುಮಾತನಾಡದೆ ಎದ್ದು ಅವಳ ಜತೆ ಕಾರಿನಲ್ಲಿ ಬಂದು ಕುಳಿತರು.

ಹೊಟೇಲಿನ ಮೆಟ್ಟಲು ಹತ್ತಿ ಮೇಲಕ್ಕೆ ಹೋಗುತ್ತಿದ್ದಂತೆ ಮೋಹಿನಿ,

"ರೂಮಿಗೆ ಹೋದ ಕೂಡಲೆ ಲೋಕಾಭಿರಾಮನನ್ನು ಕರೆಯಬೇಡಿ."

"ರೂಮಿನ ಬೀಗದ ಕೈ, ಅವನ ಹತ್ತಿರ ಇದೆ."

"ರೂಮ್‌ಬಾಯ್ ಕೈಯಲ್ಲಿ ಹೇಳಿಕಳಿಸಿ."

ಇಬ್ಬರೂ ರೂಮಿನ ಬಳಿಗೆ ಬಂದರು.

ರೂಮಬಾಯ್ ಮುಕುಂದ ಅವರನ್ನೇ ಅನುಸರಿಸಿ ಬಂದ.

"ಲೋಕಾಭಿರಾಮನ ಹತ್ತಿರ ಬೀಗದ ಕೈ ಇದೆ – ತೆಗೆದುಕೋ ಮುಕುಂದ."

ಮುಕುಂದ ಎರಡನೆಯ ರೂಮ ಬಾಗಿಲು ಬಡಿದು,

"ಸಾಹುಕಾರರು ಬಂದಿದ್ದಾರೆ ಸ್ವಾಮಿ ಬೀಗದ ಕೈ ಕೊಡಿ" ಎಂದ.

ಎರಡು ಮೂರು ನಿಮಿಷಗಳ ತರುವಾಯ ಲೋಕಾಭಿಯೇ ಎದ್ದು ಬಂದು ಬಾಗಿಲು ತೆಗೆದ.

ಮೋಹಿನಿ ಸಾಹುಕಾರರಿಗೆ ಕಣ್ಸನ್ನೆ ಮಾಡಿ ಒಳಗೆ ಹೋದಳು.

ಸಾಹುಕಾರರು ಮೆಲ್ಲನೆ,

"ಮಾಲು ಹೇಗಿದೆ ಲೋಕಾಭಿ" ಎಂದರು.

"ಚೆನ್ನಾಗಿದೆ ಸ್ವಾಮಿ - ಬಂದು ನೋಡುತ್ತೀರೇನು ?"

"ಬೇಡ ಸುಮ್ಮನಿರು - ಮೋಹಿನಿ ಬಡಿದುಕೊಳ್ಳುತ್ತಾಳೆ. ಕಳಿಸಿ ಬಿಡುತ್ತೀಯೋ ಇಟ್ಟುಕೊಂಡಿರುತ್ತೀಯೋ ?"

"ಬೆಳಿಗ್ಗೆ ಕಳಿಸುತ್ತೇನೆ."

"ಹಾಗೇ ಮಾಡು . ನಾನು ಮುಕುಂದನ ಕೈಯಲ್ಲಿ ಹೇಳಿಕಳಿಸುತ್ತೇನೆ, ಬಾ" ಎಂದರು.

ಲೋಕಾಭಿರಾಮ ತನ್ನ ರೂಮಿಗೆ ಹೋಗಲು ಸಾಹುಕಾರರು ತಮ್ಮ ರೂಮ್ ಪ್ರವೇಶಿಸಿದರು.

ರೂಮಿನ ದೀಪ ಹೊತ್ತಿಸಿರಲಿಲ್ಲ,

ವೆರಾಂಡದ ದೀಪದ ಬೆಳಕು, ವೆಂಟಿಲೇಟರ್‌ಗಳ ಮೂಲಕ ನುಗ್ಗಿ, ರೂಮನ್ನು ಅರೆಬೆಳಗಿಸಿತ್ತು.

"ಎಲ್ಲಿದ್ದೀ ಮೋಹಿನಿ."

"ಇಲ್ಲಿ"

ಎಂದು ಸಣ್ಣ ಧ್ವನಿ ಕೇಳಿ ಬಂತು.

"ಬೇಗ ಬನ್ನಿ ರಾಜಾ - ದೀಸ ಹೊತ್ತಿಸಬೇಡಿ - ಬಾಗಿಲು ಚಿಲಕ ಹಾಕಿ."

ಸಾಹುಕಾರರು ಬಾಗಿಲು ಚಿಲಕ ಹಾಕಿ ಮೆಲ್ಲನೆ ಮಂಚದ ಬಳಿ ಸರಿದರು.

ಸಾಹುಕಾರರನ್ನು ಭರದಿಂದ ಅಪ್ಪಿದ ಮೋಹಿನಿ, ಅವರನ್ನು ವಿವಸ್ತ್ರಗೊಳಿಸಿ,

"ಬನ್ನಿ ದೊರೆ - ಒಂದು ಗಳಿಗೆಯೂ ನಾನು ನಿಮ್ಮಿಂದ ದೂರವಿರಲಾರೆ" ಎಂದಳು.

ಅರ್ಧ ಮುಕ್ಕಾಲು ಗಂಟೆಯಾನಂತರ ಇಬ್ಬರೂ ಮೇಲಕ್ಕೆದ್ದು ವಸ್ತ್ರಗಳನ್ನು ಧರಿಸಿದರು.

ಸಾಹುಕಾರರು ದೀಪ ಹೊತ್ತಿಸಿ, ಲೋಕಾಭಿಗೆ ಹೇಳಿ ಕಳಿಸಿದರು.

ಮೋಹಿನಿ ಸ್ನಾನಗೃಹ ಹೊಕ್ಕಳು.

ಲೋಕಾಭಿ ಒಳಗೆ ಬರಲು ಅವನ ಸ್ಥಿತಿ ನೋಡಿ ಸಾಹುಕಾರರು ನಗುತ್ತಾ,

"ಈಗಲೇ ಲೋಡ್ (Load) ಆಗಿಬಿಟ್ಟಿದ್ದೀ !"

"ನಾನಿರಲಿ ಸ್ವಾಮಿ - ಅವಳು ಕುಡಿಯುವುದು ನೀವು ನೋಡಬೇಕು. ಎಮ್ಮೆ ಕಲಗಚ್ಚು ಹೀರಿದ ಹಾಗೆ ಹೀರುತ್ತಾಳೆ."

"ಯಾರೋ ಅವಳು."

"ಸಿನೀಮಾ ಎಕ್ಸ್ಟ್ರಾ (Extra) - ಸ್ಟಾರ್ (Star) ಎಂದು ಹೇಳಿಕೊಳ್ಳುತ್ತಾಳೆ."

"ಎಷ್ಟೋ ಟಿಕೆಟ್ಟು?"

"ಇಪ್ಪತ್ತೇ ರೂಪಾಯಿ - ನಿಮ್ಮದೂ ಸೇವಾರ್ಥ ಮುಗಿದ ಹಾಗೆ ಕಾಣುತ್ತದೆ."

"ಮುಗಿಯಿತು. ಬೀಚಿನಿಂದಲೇ ಮೋಹಿನಿ ಎಬ್ಬಿಸಿಕೊಂಡು ಬಂದಳು."

"ಅಮ್ಮಾವರು ಒಳ್ಳೆಯ ರಂಗಿನಲ್ಲಿರುವ ಹಾಗೆ ಕಾಣುತ್ತೆ."

"ಹೂ - ನನ್ನ ಕೈಬಿಡಬೇಡಿ ಎಂದು ಶಂಖ ಪೂರೈಸುತ್ತಿದ್ದಾಳೆ."

"ಶಂಖ ಪೂರೈಸದೆ ಏನು ಮಾಡುತ್ತಾರೆ - ನಿಮ್ಮಂಥ ದಣಿಗಳು ಸಿಕ್ಕಬೇಕಲ್ಲ !"

"ಹಾಗಲ್ಲ ಲೋಕಾಭಿ - ಮೋಹಿನಿ ಮನಸ್ಸು ಒಳ್ಳೆಯದು !"

"ನೀವು ಏನೇ ಹೇಳಿ ಸ್ವಾಮಿ - ಇವೆಲ್ಲಾ ಕಡಲೆ ತಿಂದು ಕೈತೊಳೆದುಕೊಂಡ ಹಾಗಿರಬೇಕು - ಮುಸರೆ ಇಟ್ಟುಕೊಳ್ಳಬಾರದು. ನಾನು ನಿಮ್ಮ ಗುಲಾಮ. ನಿಮಗೆ ಹೇಳುವ ಶಕ್ತಿ ನನಗಿಲ್ಲ. ಆದರೆ ಈ ವಿಷಯದಲ್ಲಿ ನಾನು ಮಾಡುತ್ತಿರುವುದು ಸರಿ."

"ನೀನೇನು ಮಾಡುತ್ತಿದ್ದೀ ?"

"ನೀವೇ ನೋಡಿದಿರಲ್ಲಾ - ನಾನು ಯಾವ ಗ್ರಹಾನೂ ಗಂಟುಹಾಕಿಕೊಳ್ಳುವುದಿಲ್ಲ. ಮನಸ್ಸು ಬಂದರೆ ಯಾರನ್ನಾದರೂ ಬರಮಾಡುತ್ತೇನೆ - ಅವತ್ತಿನ ಲೆಕ್ಕ ಅವತ್ತು ತೀರಿಸಿಬಿಡುತ್ತೇನೆ - ತಿರುಗಿ ಆ ಪ್ರಾಣಿ ಮುಖಕಂಡರೆ ಗುರುತು ಸಹಿತ ಹಿಡಿಯುವುದಿಲ್ಲ."

"ಬಿಡೋ - ನೀನೊಬ್ಬ ಆದರ್ಶ ಪುರುಷ. ನಿನ್ನ ಮೇಲ್ಪಂಕ್ತಿ ನಾವು ಅನುಸರಿಸಬೇಕು. ಮೋಹಿನಿ ಬರುತ್ತಿದ್ದಾಳೆ . ಸುಮ್ಮನಿರು" ಎಂದರು.

ಭಾನುವಾರ ನಗರ ಸಂದರ್ಶನ, ಪ್ರೇಕ್ಷಣೀಯ ಸ್ಥಳ ವೀಕ್ಷಣೆಗಳಿಗೆ ಮೀಸಲಾಯಿತು.

ಸಂಜೆ ಸಾಹುಕಾರರ ಟ್ರಂಕ್ ಕಾಲ್‌ಗಳನ್ನು ಮಾಡುತ್ತ ಕುಳಿತರು. ಅವರು ಫೋನ್ ಬಿಟ್ಟು ಮೇಲಕ್ಕೆ ಏಳುವ ವೇಳೆಗೆ ರಾತ್ರಿ ಹತ್ತು ಗಂಟೆಯಾಯಿತು.

ಮೋಹಿನಿ ಬೇಸತ್ತು,

"ಇನ್ನು ಮೇಲೆ ನಾನು ಫೋನ್ ಇಲ್ಲದಿರುವ ಊರಿಗೇ ನಿಮ್ಮ ಜತೆ ಬರುವುದು" ಎಂದಳು.

"ಹಾಗೇ ಆಗಲಿ"

ಎಂದು ಸಾಹುಕಾರರು ನಸುನಕ್ಕರು.

# ೧೦

ಸೋಮವಾರ ಬೆಳಗ್ಗೆ ಎದ್ದು ಸ್ನಾನ ಮುಗಿಸಿದ ಸಾಹುಕಾರರು, ಸದಾಶಿವಂನನ್ನು ರೂಮಿಗೆ ಬರಮಾಡಿಕೊಂಡು,

"ಕಲಾಕ್ಷೇತ್ರದಲ್ಲಿ ನಿಮಗೆ ಯಾರಾದರೂ ಗುರುತಿದ್ದಾರೆಯೇ ಸದಾಶಿವಂ" ಎಂದರು.

"ಇದ್ದಾರೆ, ಯಾರನ್ನು ಕಾಣಬೇಕಾಗಿತ್ತು."

"ನಮ್ಮ ಮೋಹಿನಿಯನ್ನು ಸೇರಿಸಬೇಕಾಗಿತ್ತು "

"ಕಲಾಕ್ಷೇತ್ರದ ಪ್ರಧಾನ ಕಾರ್ಯದರ್ಶಿಗಳು ದಾಮೋದರ ನನಗೆ ಬೇಕಾದವರು. ಅವರಿಗೆ ಫೋನ್ ಮಾಡುತ್ತೇನೆ."

"ಹಾಗೇ ಮಾಡಿ."

ಸಾಹುಕಾರರ ರೂಮಿನಿಂದಲೇ ಸದಾಶಿವಂ, ದಾಮೋದರನ್‌ಗೆ ಫೋನ್ ಮಾಡಿ ಮುಗಿಸಿ,

"ಒಂಭತ್ತು ಗಂಟೆಗೆ ದಾಮೋದರನ್ ನಿಮ್ಮನ್ನು ನಿರೀಕ್ಷಿಸುತ್ತಿರುತ್ತಾರೆ" ಎಂದರು.

ಕೂಡಲೆ ಸಾಹುಕಾರರು, ಮೋಹಿನಿ, ಲೋಕಾಭಿರಾಮ ಉಪಾಹಾರ ಮುಗಿಸಿ 'ಕಲಾಕ್ಷೇತ್ರ'ದ ಕಡೆ ಹೊರಟರು.

ಶ್ರೀಮತಿ ರುಕ್ಮಣಿ ಅರುಂಡೇಲರ ಮಹದ್ಪ್ರಯತ್ನ, ಉನ್ನತಾಭಿರುಚಿ, ಕಲಾಪ್ರಾವೀಣ್ಯದ ಸಂಕೇತವಾಗಿ ಅಡೆಯಾರಿನಲ್ಲಿ 'ಕಲಾಕ್ಷೇತ್ರ' ವಿರಾಜಿಸುತ್ತಿತ್ತು.

ಒಂದು ದೊಡ್ಡ ತೋಟದಲ್ಲಿ ಸ್ಥಾಪಿಸಲ್ಪಟದ್ದ ಕಲಾಕ್ಷೇತ್ರದಲ್ಲಿ ಭವ್ಯವಾದ ಕಟ್ಟಡಗಳಾಗಲಿ, ಕಣ್ಣು ಕೋರೈಸುವ ರಂಗಮಂಟಪವಾಗಲಿ ಇರಲಿಲ್ಲ. ಅಲ್ಲಿ ಇದ್ದುದೆಲ್ಲಾ ತಡಿಕೆ ಗೋಡೆಗಳಿಗಳಿಂದ ನಿರ್ಮಿತವಾಗಿದ್ದ ಕೆಲವು ಗುಡಿಸಲುಗಳು.

ರುಕ್ಮಿಣಿದೇವಿಯವರು ಕಲ್ಲು ಮಣ್ಣು ಇಟ್ಟಿಗೆ, ಗಾರೆಗಳಿಗೆ ಪ್ರಾಶಸ್ತ್ಯ ಕೊಟ್ಟಿರಲಿಲ್ಲ. ವಿವಿಧ ಲಲಿತಕಲೆಗಳಲ್ಲಿ ಶೇಷ್ಠ ಜೇಷ್ಠ ಸ್ಥಾನ ಗಳಿಸಿಕೊಂಡಿದ್ದ ಹಿರಿಯ ಕಲಾವಿದರನ್ನು ಅತ್ಯಾದರಪೂರ್ವಕವಾಗಿ ಬರಮಾಡಿಕೊಂಡು, ಅವರಿಗೆ ಶಿಕ್ಷಣದ ಜವಾಬುದಾರಿಯನ್ನು ವಹಿಸಿದ್ದರು.

ಸ್ವಯಂ ಶ್ರೇಷ್ಠ ಕಲಾವಿದೆಯರಾದ ರುಕ್ಮಿಣಿದೇವಿಯವರ ನೃತ್ಯ ನಾಟಕಗಳು - ಕುಮಾರ ಸಂಭವ, ಕುರ್ತಾಲ ಕೊರವಂಜಿ, ರಾಮಾಯಣ ಭಾರತೀಯ ಲಲಿತಕಲೆಯ ಮಕುಟಮಣಿಗಳಾಗಿ ವರ್ಧಿಸಿದ್ದವು.

ಲುಂಗಿ, ಜುಬ್ಬ, ದಪ್ಪ ಕನ್ನಡಕ ಧರಿಸಿ, ಅರ್ಧನರೆಗೂದಲು ಪಡೆದಿದ್ದ ದಾಮೋದರ, ಅತಿಥಿಗಳನ್ನು 'ಕಲಾಕ್ಷೇತ್ರ'ದ ಪ್ರವೇಶದ್ವಾರದಲ್ಲಿಯೇ ಸ್ವಾಗತಿಸಿ,

"ಮೈಸೂರಿನ ಹೊನ್ನಪ್ಪನವರು ನೀವೇ ಅಲ್ಲವೇ ?" ಎಂದರು.

"ಹೌದು."

"ನಾನೇ ದಾಮೋದರನ್ - ಕಲಾಕ್ಷೇತ್ರದ ಪ್ರಧಾನ ಕಾರ್ಯದರ್ಶಿ."

ಸಾಹುಕಾರರು ಅವರ ಕೈ ಕುಲುಕಿ,

"ಇವರು ನನ್ನ ನೀಸ್ (niece)- ಮೋಹಿನಿ ; ಇವರು ನನ್ನ ಪ್ರೈವೇಟ್ ಸೆಕ್ರೆಟರಿ ಲೋಕಾಭಿರಾಮ್."

"ಬಳಗೆ ಬನ್ನಿ."

ಎಂದು ಎಲ್ಲರನ್ನೂ ತಮ್ಮ ಕಾರ್ಯಾಲಯಕ್ಕೆ ಕರೆದೊಯ್ದು ದಾಮೋದರನ್ ಮೊದಲು ಕಾಫಿ ತರಿಸಿಕೊಟ್ಟು,

"ನನ್ನಿಂದ ಏನಾಗಬೇಕು. ಅಪ್ಪಣೆಯಾಗಲಿ." ಎಂದರು.

"ನನ್ನ ನೀಸ್ ನಿಮ್ಮಿಂದ ಅಪ್ಲಿಕೇಷನ್ ಫಾರ್ಮ್ (application form) ತರಿಸಿಕೊಂಡಿದ್ದಳು. ಕಲಾಕ್ಷೇತ್ರ ಸೇರಲು ಅವಳು ತುಂಬ ಉತ್ಸುಕಳಾಗಿದ್ದಾಳೆ."

ದಾಮೋದರನ್ ಮೋಹಿನಿಯ ಕಡೆ ತಿರುಗಿ,

"ಏನಮ್ಮಾ- ನಿಮಗೆ ನೃತ್ಯಪಾಠವಾಗಿದೆಯೇ?"

"ಆಗಿದೆ. ಬೆಂಗಳೂರಿನಲ್ಲಿ ನಾನು ಶಂಕರನ್ ಅವರ ಹತ್ತಿರ ಅಭ್ಯಾಸಮಾಡುತ್ತಿದ್ದೆ." ಎಂದು ತನ್ನ ಅಪ್ಲಿಕೇಷನ್ ಫಾರ್ಮ್ ದಾಮೋದರನ್ ಮುಂದಿಟ್ಟಳು.

"ನಮ್ಮ ತರಗತಿಗಳು ನಡೆಯುತ್ತಿವೆ. ಬನ್ನಿ - ತೋರಿಸುತ್ತೇನೆ. ಆ ಮೇಲೆ ಮಾತನಾಡೋಣ."

ಎಂದು ಎಲ್ಲರನ್ನೂ ಸಂಗೀತ ಶಾಲೆಗೆ ಕರೆದೊಯ್ದರು.

ಒಂದೆಡೆ ಕೆಲವು ಪ್ರೌಢ ವಿದ್ಯಾರ್ಥಿಗಳಿಗೆ ಗಾಯನ ಕೇಸರಿ ಟೈಗರ್ ವರದಾಚಾರ್ಯರು ಪಾಠ ಹೇಳುತ್ತಿದ್ದರು, ಇನ್ನೊಂದೆಡೆ ವೈಣಿಕ ಪ್ರವೀಣ ಕಾರೈಕುಡಿ ಸಾಂಬಶಿವ ಅಯ್ಯರ್ ಕೆಲವು ವಿದ್ಯಾರ್ಥಿನಿ, ವಿದ್ಯಾರ್ಥಿಗಳಿಗೆ ವೀಣೆಯ ಪಾಠ ಹೇಳಿಕೊಡುತ್ತಿದ್ದರು.

ಸ್ವಲ್ಪ ಕಾಲ ಕಳೆದ ಮೇಲೆ ದಾಮೋದರನ್ ಅತಿಥಿಗಳನ್ನು ನೃತ್ಯಶಾಲೆಗೆ ಕರೆದೊಯ್ದರು.

ಕಲಾಕ್ಷೇತ್ರದ ನೃತ್ಯಾಚಾರ್ಯ ಪರಮೇಶ್ವರ ಪಿಳ್ಳೆ ಕೆಲವು ವಿದ್ಯಾರ್ಥಿ, ವಿದ್ಯಾರ್ಥಿನಿಯವರಿಗೆ ನೃತ್ಯಾಭ್ಯಾಸ ಮಾಡಿಸುತ್ತಿದ್ದರು.

ಪರಮೇಶ್ವರ ಪಿಳ್ಳೆ ಪಾಠ ಮಾಡಿಸುತ್ತಿದ್ದ ಜತಿಸ್ವರ ಮುಗಿದ ಮೇಲೆ, ಅವರನ್ನು ಸಮೀಪಕ್ಕೆ ಕರೆದ ದಾಮೋದರನ್ ಅತಿಥಿಗಳ ಪರಿಚಯ ಮಾಡಿಕೊಟ್ಟು,

"ಈಕೆ ಕಲಾಕ್ಷೇತ್ರ ಸೇರಬೇಕೆಂದು ಬಂದಿದ್ದಾರೆ" ಎಂದನು.

ಮೋಹಿನಿಯನ್ನು ಆಪಾದಮಸ್ತಕ ನೋಡಿದ ಪರಮೇಶ್ವರ ಪಿಳ್ಳೆ,

"ಈ ಮೊದಲೇ ಪಾಠವಾಗಿದೆಯೇನಮ್ಮ" ಎಂದರು.

"ಸ್ವಲ್ಪ ಪಾಠವಾಗಿದೆ."

"ಅಲ್ಲಿ ಗೆಜ್ಜೆ ಇದೆ - ಕಟ್ಟಿಕೊಳ್ಳಿ."

ಮೋಹಿನಿ ಗೆಜ್ಜೆ ಕಟ್ಟಿಕೊಳ್ಳಲು ಪರಮೇಶ್ವರ ಪಿಳ್ಳೆ ಪಕ್ಕವಾದ್ಯದವರಿಗೆ ಸೂಚನೆಯಿತ್ತರು,

ಮೋಹಿನಿ ಸ್ಥಿರಮುದ್ರೆಯಲ್ಲಿ ನಿಂತಳು.

ಪರಮೇಶ್ವರ ಪಿಳ್ಳೆ ಒಂದು ಆವರ್ತ ತಾಳ ಹಾಕಲು, ವಾದ್ಯಗಾರರು, ನುಡಿಸಲಾರಂಭಿಸಿದರು. ಮೋಹಿನಿ ನರ್ತಿಸಲಾರಂಭಿಸಿದಳು.

ಅವಳು ವರ್ಣ, ಜತಿಸ್ವರ, ತಿಲಾನ, ಪದ, ಜಾವಡಿ ಪ್ರದರ್ಶಿಸಿದ ಮೇಲೆ ಎಲ್ಲರೂ ನೃತ್ಯ ಶಾಲೆಯಿಂದ ಹೊರಬಿದ್ದರು.

ದಾಮೋದರನ್ ಪರಮೇಶ್ವರ ಪಿಳ್ಳೆಯವರನ್ನು ಸ್ವಲ್ಪ ದೂರ ಕರೆದೊಯ್ದು,

"ನಿಮ್ಮ ಅಭಿಪ್ರಾಯವೇನು ?" ಎಂದರು.

"ಪರವಾಗಿಲ್ಲ - ಅಭಿನಯ ಭಾಗ ಚೆನ್ನಾಗಿದೆ - ತಾಳ ಖಚಿತವಾಗಬೇಕು. ಹುಡುಗಿ ಜಾಣೆ - ಕಲಿಯಬಲ್ಲಳು " ಎಂದರು.

ತಮ್ಮ ಕಛೇರಿಗೆ ಮತ್ತೆ ಎಲ್ಲರನ್ನೂ ಕರೆದುಕೊಂಡು ಬಂದ ದಾಮೋದರನ್,

"ಪರಮೇಶ್ವರ ಪಿಳ್ಳೆ ಒಳ್ಳೆಯ ಅಭಿಪ್ರಾಯ ಕೊಟ್ಟಿದ್ದಾರೆ. ನಿಮ್ಮ ನೀಸ್‌ನ ಸೇರಿಸಿಕೊಳ್ಳುತ್ತೇನೆ" ಎಂದರು.

"ಹಣ ಎಷ್ಟು ಕೊಡಬೇಕು."

"ಅಪ್ಲಿಕೇಷನ್ ಹಣ, ಫೀಸು."

"ಮೋಹಿನಿ ನಿಮ್ಮ ಹಾಸ್ಟಲ್ಲಿನಲ್ಲೇ ಇರುತ್ತಾಳೆ."

"ಆಗಬಹುದು."

"ಒಂದು ಟರ್ಮಿನ ಫೀಸು ಹಾಸ್ಟಲ್ ಖರ್ಚು ಎಷ್ಟಾಗುವುದು ಹೇಳಿ. ಟರ್ಮ್ ಮುಗಿದ ಕೂಡಲೆ ನೀವು ಕಾಗದ ಬರೆದು ನಾನು ಇನ್ನೊಂದು ಟರ್ಮ್ ಹಣ ಕಳಿಸಿಕೊಡುತ್ತೇನೆ."

"ಹಾಗೇ ಆಗಬಹುದು. ನಾನು ಯಾವ ವಿಳಾಸಕ್ಕೆ ಕಾಗದ ಬರೆಯಬೇಕು ?"

"ನನ್ನ ವಿಳಾಸ - 'ದಿಲ್‌ರುಬಾ' - ರೆಸಿಡೆನ್ಸಿ ರೋಡ್, ಸಿವಿಲ್ ಸ್ಟೇಷನ್, ಬೆಂಗಳೂರು. - ಚೆಕ್ ಕೊಟ್ಟರೆ ಆಗುತ್ತದಷ್ಟೆ !"

"ಆಗುತ್ತದೆ."

ದಾಮೋದರನ್ ತಿಳಿಸಿದ ಹಣಕ್ಕೆ ಸಾಹುಕಾರರು ಒಂದು ಚೆಕ್ ಇತ್ತು, ರಶೀತಿ ತೆಗೆದುಕೊಂಡು,

"ಇಲ್ಲಿಗೆ ಮೋಹಿನಿಯನ್ನು ಯಾವಾಗ ಕಳಿಸಿಕೊಡಲಿ."

"ಇವತ್ತೇ ಬರಬಹುದು."

"ನಾನು ಇಲ್ಲಿ ಇನ್ನೂ ಒಂದೆರಡು ದಿನವಿರುತ್ತೇನೆ. ನಾನು ಹೊರಡುವ ದಿನ ಅವಳನ್ನು ಕರೆತಂದು ಬಿಟ್ಟು ಹೋಗುತ್ತೇನೆ."

"ಹಾಗೇ ಮಾಡಿ."

ಎಂದು ದಾಮೋದರನ್ ಹೇಳಲು, ಸಾಹುಕಾರರು ಅವರಿಗೆ ನಮಿಸಿ ಮೋಹಿನಿ, ಲೋಕಾಭಿರಾಮನೊಂದಿಗೆ ಹೋಟೆಲ್ ಅಭಿಮುಖರಾದರು.

ದಾರಿಯಲ್ಲಿ ಬರುತ್ತ ಸಾಹುಕಾರರು,

"ಮೋಹಿನಿ, ನಿನಗೇನಾದರೂ ಬಟ್ಟೆ ಬರೆ ಬೇಕಾಗಿತ್ತೇ?" ಎಂದು ಕೇಳಿದರು.

"ಬೇಕಾಗಿತ್ತು."

ಕಾರನ್ನು ಮೌಂಟ್ ರೋಡಿಗೆ ಬಿಡುವಂತೆ ಸಾಹುಕಾರರು ಸಿದ್ದಪ್ಪನಿಗೆ ಆಜ್ಞೆ ಮಾಡಿದರು.

ಮೋಹಿನಿ ಮೌಂಟ್ ರೋಡಿನಲ್ಲಿ ಒಂದು ಲೆದರ್ ಸೂಟ್‌ಕೇಸ್, ವಾಯಿಲ್ ಸೀರೆಗಳು, ಲಂಗಗಳು, ಬೋಳಿಗಳು, ಮೊಲೆಗಟ್ಟುಗಳು, ಥರ್ಮಾಸ್ ಫ್ಲಾಸ್ಕ್ ಅಲಂಕಾರ ಸಾಮಗ್ರಿಯಗಳನ್ನು ಕೊಂಡಳು.

ಮೆಲ್ಲನೆ ಸಾಹುಕಾರರ ಬಳಿಗೆ ಬಂದ ಲೋಕಾಭಿರಾಮ,

"ನನಗೆ ಸ್ವಲ್ಪ ಬಟ್ಟೆ ಬೇಕಾಗಿತ್ತು ಸ್ವಾಮಿ" ಎಂದ.

"ನಿನಗೇನು ಬೇಕೋ ತೊಗೋ"

ಒಂದಂಗಡಿಯಲ್ಲಿ ಲೋಕಾಭಿ ಪಂಚೆ, ಷರಟಿನ ಬಟ್ಟೆ, ನೆಟ್ ಬನೀನು, ರಗ್ಗು, ಕೋಟಿನ ಬಟ್ಟೆ ಖರೀದಿ ಮಾಡಿದ.

"ಸಿದ್ದೂಗೆ ಒಂದು ಜತೆ ಪಂಚೆ, ಎರಡು ಷರಟುಗಳಿಗಾಗುವಷ್ಟು ಬಟ್ಟೆ ತೊಗೋ ಲೋಕಾಭಿ"

ಎಂದು ಸಾಹುಕಾರರು ತಿಳಿಸಿದರು.

ವ್ಯಾಪಾರ ಮುಗಿಸಿಕೊಂಡು ಎಲ್ಲರೂ ಹೋಟಲಿಗೆ ಹಿಂದಿರುಗಲು ಮೋಹಿನಿ ಮುಖ ಗಂಟುಹಾಕಿಕೊಂಡು,

"ನೀವು ನಾಳೆ - ನಾಡಿನ್ದು ಹೊರಟುಬಿಡಬೇಕೇ ?"

"ಬಂದ ಕೆಲಸವಾಯಿತಲ್ಲಾ ಇನ್ನು ಇಲ್ಲಿ ಕುಳಿತೇನು ಮಾಡಲಿ."

"ಒಂದು ವಾರವಾದರೂ ನೀವು ಇಲ್ಲಿರಬೇಕು - ಸುತ್ತ ಸುತ್ತ ನೋಡುವ ಅನೇಕ ಸ್ಥಳಗಳಿವೆ - ಹೋಗಿ ಬರೋಣ."

"ವಾರ ಬೇಡ ಮೋಹಿನಿ - ಮೂರು ದಿವಸ ಇರುತ್ತೇನೆ – ಗುರುವಾರ ಹೊರಡುತ್ತೇನೆ."

"ಗುರುವಾರ ಬೇಡಿ - ಶನಿವಾರ ಹೊರಡಿ."

ವಿಧಿಯಿಲ್ಲದೆ ಸಾಹುಕಾರರು 'ಆಗಲಿ' ಎಂದರು.

## ೧೧

ನಾಲ್ಕು ದಿನಗಳು ಕಳೆದು ಹೋದುದೇ ಮೋಹಿನಿಗೆ ತಿಳಿಯಲಿಲ್ಲ. ಮದರಾಸಿನ ಸುತ್ತಮುತ್ತಲಿದ್ದ ಕಂಚಿ, ಕಾಳಹಸ್ತಿ, ತಿರುವಳ್ಳಿಕುಂಡ್ರಂ, ಮಹಾಬಲಿಪುರಗಳಲ್ಲಿ ಮೋಹಿನಿ, ಸಾಹುಕಾರರು ಸುತ್ತಾಡಿಕೊಂಡು ಬಂದರು.

ಮಾರನೆಯ ಬೆಳಿಗ್ಗೆ ಸಾಹುಕಾರರ ಪ್ರಯಾಣ ನಿಶ್ಚಯವಾಗಿದ್ದುದರಿಂದ ಶುಕ್ರವಾರ ಸಂಜೆ ಇಬ್ಬರೂ ರೂಮು ಬಿಟ್ಟು ಕದಲಲಿಲ್ಲ.

ಲೋಕಾಭಿರಾಮ, ಸಿದ್ದಪ್ಪನನ್ನು ಜತೆಯಲ್ಲಿ ಕೂಡಿಸಿಕೊಂಡು ತನ್ನ ರೂಮಿನಲ್ಲಿ 'ಸ್ತ್ರೀರಾಮ'ನ ಸೇವಾಮಗ್ನನಾಗಿದ್ದ.

ಅವನ ರೂಮಿಗೆ ಬಂದ ಮುಕುಂದ,

"ಮ್ಯಾನೇಜರು ನಿಮ್ಮನ್ನು ಕರೆಯುತ್ತಾರೆ ಸಾರ್" ಎಂದ.

"ನನ್ನನ್ನೇ ?"

"ನಿಮ್ಮನ್ನೇ "

"ಏಕೆ?"

"ಏಕೆಯೆಂದು ನನಗೆ ಹೇಳುತ್ತಾರೆಯೇ ಸಾರ್."

"ಬರ್ತೀನೀಂತ ಹೇಳು ಮುಕುಂದ."

ಎಂದು ಜುಬ್ಬ ಧರಿಸಿ, ಹೆಗಲ ಮೇಲೆ ಒಂದು ಟವಲು ಹಾಕಿಕೊಂಡು ಆಫೀಸಿಗೆ ಬಂದ.

ಸದಾಶಿವಂ ಅವನನ್ನು ಒಳಕೋಣೆಗೆ ಕರೆದೊಯ್ದು ಕೂಡಿಸಿಕೊಂಡು, ಗ್ಲಾಸಿಗೆ ಸ್ವಲ್ಪ ಬ್ರ್ಯಾಂದಿ ಬಗ್ಗಿಸಿ ಅವನ ಕೈಗಿತ್ತು,

"ಡ್ರಿಂಕ್ಸ್ ತರಿಸಿದ್ದೆ. ಒಬ್ಬನೇ ಕುಳಿತು ಕುಡಿಯುವುದಕ್ಕೆ ಬೇಸರವಾಗಿ ನಿಮಗೆ ಹೇಳಿಕಳಿಸಿದೆ ಲೋಕಾಭಿರಾಮ್. ನಿಮ್ಮ ಕೆಲಸಕ್ಕೆ ಅಡಚಣೆ ಮಾಡಿದಂತಾಯಿತೇ ?"

"ನನಗೇನು ಕೆಲಸ ಸಾರ್. ರೂಮಿನಲ್ಲಿ ಕುಳಿತುಕೊಂಡು ನಾನೂ 'ಸ್ತ್ರೀರಾಮ' ಹಾಕುತ್ತಿದ್ದೆ."

ಲೋಕಾಭಿರಾಮನನ್ನು ಉಪಚರಿಸಿ, ಅವನಿಗೆ ಎರಡು ಪೆಗ್ ಬ್ರ್ಯಾಂದಿ ಹುಯ್ದ ಸದಾಶಿವಂ,

“ನೀವು ಮೇಲಿಂದ ಮೇಲೆ ಮದರಾಸಿಗೆ ಬರುತ್ತಿರುತ್ತೀರಾ ಲೋಕಾಭಿರಾಮ್”.

“ಬರುತ್ತಿರುತ್ತೇನೆ. ಎರಡು ತಿಂಗಳು ಮೂರು ತಿಂಗಳಿಗೊಮ್ಮೆ ನನಗೆ ಗ್ರಾಮಫೋನ್ ರಿಕಾರ್ಡಿಂಗ್ ಇರುತ್ತದೆ.”

“ನೀವು ಗ್ರಾಮಫೋನ್ ಆರ್ಟಿಸ್ಟೇ?”

“ಹೌದು ಸಾರ್ - ನನ್ನದು ಒಂಭತ್ತು ರಿಕಾರ್ಡುಗಳು ಬಂದಿವೆ. ನಾಲ್ಕು ನಾಟಕದ ಸೆಟ್ಟುಗಳಲ್ಲಿ ನಾನು ಪಾರ್ಟು ಮಾಡಿದ್ರೇನೆ.”

“ಸಂತೋಷ- ಬಹಳ ಸಂತೋಷ. ಗ್ರಾಮಫೋನ್ ಕಂಪೆನಿ ವೈದ್ಯನಾಥನ್‌ನಿಂದ ಏನಾದರೂ ಆಗಬೇಕಾದರೆ ನನಗೆ ಹೇಳಿ - ನಾನು ಮಾಡಿಸಿ ಕೊಡುತ್ತೇನೆ. ಅವನೂ ನಾನೂ ಸಮೀಪ ಬಂಧುಗಳು.”

ಲೋಕಾಭಿರಾಮ ಬಾಯಿ ಬಾಯಿ ಬಿಟ್ಟು,

“ಹಾಗೇನು ಸಾರ್.”

“ಹೂ!”

“ನನಗೆ ಅವರಿಂದ ಬಹಳ ಕೆಲಸವಾಗಬೇಕು ಸಾರ್. ಖಂಡಿತ ಬಂದು ನಿಮಗೆ ಹೇಳುತ್ತೇನೆ.”

“ನೀವು ಮದರಾಸಿಗೆ ಬಂದರೆ ಎಲ್ಲಿ ಇಳಿದುಕೊಳ್ಳುತ್ತೀರಿ.”

“ವುಡ್‌ಲೆಂಡ್ಸ್ ಹೋಟಲಿನಲ್ಲಿ !”

“ಇನ್ನು ಮೇಲೆ ಇಲ್ಲಿಗೇ ಬನ್ನಿ. ನಿಮಗೆ ಬೇಕಾದ ಸೌಕರ್ಯ ನಾನು ಕಲ್ಪಿಸಿಕೊಡುತ್ತೇನೆ.”

“ಇನ್ನು ನಾನು ಬೇರೆ ಕಡೆ ಹೋಗುತ್ತೇನೆಯೇ ?”

ಸದಾಶಿವಂ ಲೋಕಾಭಿರಾಮನಿಗೆ ಇನ್ನೊಂದು ಪೆಗ್ ಬ್ರ್ಯಾಂದಿ ಹಾಕಿ,

“ನಿಮ್ಮ ಸಾಹುಕಾರರು ಏನು ಮಾಡುತ್ತಿದ್ದಾರೆ ಲೋಕಾಭಿರಾಮ್”

“ಗೊತ್ತೇ ಇದೆಯಲ್ಲ ಸಾರ್.”

“ನಾಳೆ ಬೆಳಿಗ್ಗೆ ನೀವು ಹೊರಟುಬಿಡುವಿರಂತೆ !”

“ಹೌದು.”

“ಮೋಹಿನಿದೇವಿ ಇಲ್ಲೇ ಇರುತ್ತಾರೆ.”

“ಹೌದು, ಅವರು ಕಲಾಕ್ಷೇತ್ರ ಸೇರಿದ್ದಾರಲ್ಲಾ.”

“ಅದು ಗೊತ್ತಾಯಿತು. ನಿಮ್ಮ ಸಾಹುಕಾರರೇ ಹೇಳಿದರು.”

“ಮೋಹಿನಿದೇವಿ ಸಾಹುಕಾರರಿಗೆ ಏನಾಗಬೇಕು ಲೋಕಾಭಿರಾಮ್.”

“ಏನಾಗಬೇಕೆಂದು ಊಹಿಸಲಾರಿರಾ ಸದಾಶಿವಂ?”

“ಊಹಿಸಿದ್ದೇನೆ. ಈಕೆ ಸಾಹುಕಾರರಿಗೆ ಸಂಬಂಧವೇ ?”

“ಅಲ್ಲವೇ ?”

ಎಂದು ಲೋಕಾಭಿರಾಮ ನಕ್ಕ.

“ಅಷ್ಟೇ ತಾನೆ ?”

“ಅಷ್ಟೇ !”

“ನೀವು ನನಗೆ ಮೋಹಿನಿದೇವಿಯ ಪರಿಚಯ ಮಾಡಿಕೊಟ್ಟಿದ್ದರೆ ಚೆನ್ನಾಗಿತ್ತು.”

“ನಿಮಗೆ ಪರಿಚಯವಾಗಿದೆಯಲ್ಲಾ !”

“ಹಾಗಲ್ರೀ - ಸರಿಯಾಗಿ....!”

“ಸಾಹುಕಾರರು ಇದ್ದಾರಲ್ಲಾ...”

“ಅವರು ನಾಳೆ ಊರಿಗೆ ಹೋಗಲಿ ನೀವು ಇನ್ನೂ ಒಂದೆರಡು ದಿನ ಇಲ್ಲೇ ಇರಿ.”

“ಈಗ ನಾನು ನಿಲ್ಲಲು ಸಾಧ್ಯವಿಲ್ಲ ಮಿ. ಸದಾಶಿವಂ. ಸಾಹುಕಾರರಿಗೆ ಅನುಮಾನ ಬಂದರೆ ನಾನು ಉಣ್ಣುವ ಅನ್ನಕ್ಕೆ ಕಲ್ಲು ಬೀಳುತ್ತದೆ. ನಿಮಗೆ ಬೇಕಾದರೆ ನಾನು ಮುಂದಿನ ವಾರ ಬರುತ್ತೇನೆ.”

“ಹಾಗೇ ಮಾಡಿ, ನೀವು ಬಂದಾಗ ನನ್ನ ಕೆಲಸ....”

“ಅದರ ಯೋಚನೆ ಬಿಟ್ಟುಬಿಡಿ - ಇನ್ನೊಂದು ವಿಷಯ ಮಿ. ಸದಾಶಿವಂ.”

“ಹೇಳಿ.”

“ನೀವು ಧಾರಾಳವಾಗಿ ಹಣ ಬಿಚ್ಚಿದಲ್ಲದೆ ಈ ಕೆಲಸವಾಗುವುದಿಲ್ಲ.”

“ಆ ಬಗ್ಗೆ ನೀವು ಯಾವ ಯೋಚನೆಯನ್ನೂ ಇಟ್ಟುಕೊಳ್ಳಬೇಡಿ.”

“ಹಾಗಾದರೆ ಸರಿ.”

“ಇನ್ನು ಸ್ವಲ್ಪ ತೆಗೆದುಕೊಳ್ಳುತ್ತೀರೇನು?”

“ಬೇಡಿ ಬೇಡಿ ಸಾಕು - ಸಾಹುಕಾರರ ಜತೆ ಬೇರೆ ನಾನು ತೆಗೆದುಕೊಳ್ಳಬೇಕು.”

“ಮೋಹಿನಿ ದೇವಿಯೂ ತೆಗೆದುಕೊಳ್ಳುತ್ತಾರೋ ?”

“ಕೊಡಿಸಿ ನೋಡಿ - ನಿಮಗೇ ಗೊತ್ತಾಗತ್ತೆ”

ಎಂದು ಹೇಳಿ ತನ್ನ ರೂಮಿಗೆ ಹಿಂದಿರುಗಿದ.

ಶುಕ್ರವಾರ ರಾತ್ರಿಯೆಲ್ಲಾ ಸಾಹುಕಾರರಿಗೆ ಮೋಹಿನಿಯ ಗೋಳು ಕೇಳುವುದೇ ಅಯಿತು.

’ನೀವು ನಿತ್ಯವೂ ನನಗೆ ಕಾಗದ ಬರೆಯಬೇಕು.

’ಎರಡು ಮೂರು ದಿನಕ್ಕೊಮ್ಮೆ ಟ್ರಂಕ್ ಕಾಲ್ ಮಾಡಬೇಕು.

ಇನ್ನೊಂದು ವಾರ - ಹತ್ತು ದಿನಗಳಲ್ಲಿ ಇಲ್ಲಿಗೆ ಬರಬೇಕು’

ಎಂದು ಕರಾರುಗಳನ್ನು ವಿಧಿಸಿದಳು.

ಸಾಹುಕಾರರು ಎಲ್ಲ ಕರಾರುಗಳನ್ನೂ ಒಪ್ಪಿಕೊಂಡರು.

ಶನಿವಾರ ಬೆಳಿಗ್ಗೆ ಸಾಹುಕಾರರು, ಮೋಹಿನಿಯನ್ನು ಕರೆದೊಯ್ದು ’ಕಲಾಕ್ಷೇತ್ರ’ದ ಹಾಸ್ಟಲಿನಲ್ಲಿ ಬಿಟ್ಟು, ಬೆಂಗಳೂರಿಗೆ ಲೋಕಾಭಿರಾಮನೊಂದಿಗೆ ಪ್ರಯಾಣ ಬೆಳಸಿದರು.

ಕಲಾಕ್ಷೇತ್ರದ ಹೆಣ್ಣುಮಕ್ಕಳ ಹಾಸ್ಟಲ್ಲಿನಲ್ಲಿ ಮೋಹಿನಿ, ಕಲಾವತಿಯ ರೂಮ್ ಸೇರಬೇಕಾಯಿತು.

ಪರಿಚಯವಾದ ಮೂರು ದಿನಗಳಾನಂತರ ಅವರಲ್ಲಿ ಬಳಕೆ ಬೆಳೆಯಿತು.

ಒಂದು ಸಂಜೆ ಇಬ್ಬರೂ ಕ್ಲಾಸ್ ಮುಗಿಸಿಕೊಂಡು ಬಂದು ರೂಮಿನಲ್ಲಿ ಕುಳಿತರು.

"ಮದರಾಸಿನಲ್ಲಿ ನಿಮ್ಮ ಮನೆ ಇರುವಾಗ, ಹಾಸ್ಟೆಲ್ ಏಕೆ ಸೇರಿದಿರಿ ಕಲಾವತಿ ?"

ಎಂದು ಮೋಹಿನಿ ಕೇಳಿದಳು.

"ನನ್ನ ಅಣ್ಣನಿಗೆ ಕೈತುಂಬ ಕೆಲಸ. ದಿನಕ್ಕೆ ನಾಲ್ಕಾರು ಬಾರಿ ನನಗೆ ಕಾರು ಕೊಡಬೇಕೆಂದರೆ ಅವನಿಗೆ ತೊಂದರೆಯಾಗುತ್ತದೆ. ಅದೂ ಅಲ್ಲದೆ ನಮ್ಮ ಕ್ಲಾಸುಗಳು ಏಳಕ್ಕೇ ಆರಂಭವಾಗುವುದರಿಂದ ನಾನು ವೇಳೆಗೆ ಸರಿಯಾಗಿ ಇಲ್ಲಿಗೆ ಬರಲಾಗುತ್ತಿರಲಿಲ್ಲ. ಇದೆಲ್ಲವನ್ನೂ ಯೋಚಿಸಿ, ಕಲಾಕ್ಷೇತ್ರದ ಹಾಸ್ಟಲ್ಲಿನಲ್ಲಿ ಇರುವುದೇ ಒಳ್ಳೆಯದೆಂದು ನಿಶ್ಚಯಿಸಿದೆ."

"ನಿಮ್ಮ ಅಣ್ಣ ಏನು ಮಾಡುತ್ತಿದ್ದಾರೆ ?"

"ಬಾರಿಸ್ಟರ್ ಆಗಿದ್ದಾನೆ."

"ನಿಮ್ಮ ತಂದೆಯವರು ?"

"ಅವರು ತೀರಿಕೊಂಡು ನಾಲ್ಕು ವರ್ಷಗಳಾಗಬಹುದು. ನೀವು ಅವರ ಹೆಸರು ಕೇಳಿರಬಹುದು – ಟಿ. ಆರ್. ವೆಂಕಟೇಶ್ವರ ಅಯ್ಯರ್ - ನಿಮ್ಮ ಮೈಸೂರು ಹೈಕೋರ್ಟಿಗೂ ಅವರು ಹೋಗುತ್ತಿದ್ದರು."

"ನಿಮಗೆ ಸೋದರ, ಸೋದರಿಯರು ಎಷ್ಟು ಮಂದಿ ಇದ್ದಾರೆ."

"ನಮ್ಮಣ್ಣ ಜಯರಾಮ್ ಅವರೇ ದೊಡ್ಡವರು ; ಆಮೇಲೆ ನನ್ನ ಚಿಕ್ಕಣ್ಣ ವಾಸನ್; ಅವನಾದ ಮೇಲೆ ನಾನು. ನಾವು ಮೂವರು"

"ನಿಮ್ಮ ಚಿಕ್ಕಣ್ಣ ಏನು ಮಾಡುತ್ತಿದ್ದಾರೆ ?"

"ಹಿಸ್ಟರಿ, ಎಕನಾಮಿಕ್ಸ್, ಪಾಲಿಟಿಕ್ಸ್ (History, Economics, Politics) ತನ್ನ ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ನನ್ನ ಚಿಕ್ಕಣ್ಣ ಬಿ.ಎ. ಎಂ.ಎ. ಎರಡರಲ್ಲಿಯೂ ಫಸ್ಟ್‌ಕ್ಲಾಸ್

ತೆಗೆದುಕೊಂಡ. ನಮ್ಮ ದೊಡ್ಡಣ್ಣನ ಪ್ರಭಾವದಿಂದ ಅವನಿಗೆ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಲೆಕ್ಚರರ್ ಕೆಲಸವೂ ಸಿಕ್ಕಿತು. ಒಂದು ವರ್ಷ ಕೆಲಸ ಮಾಡಿ ರಾಜೀನಾಮೆ ಕೊಟ್ಟುಬಿಟ್ಟ."

"ಏಕೆ ?"

"ಕಮ್ಯುನಿಸ್ಟರ ಪ್ರಭಾವ. ಕಮ್ಯುನಿಸ್ಟ್ ಪಾರ್ಟಿ ಸೆಕ್ರೆಟರಿ ತಿರುಜ್ಞಾನ ಸಂಬಂಧಂ ಮತ್ತು ನನ್ನ ಅಣ್ಣ ವಾಸನ್ ಸಹಪಾಠಿಗಳು, ಸ್ನೇಹಿತರು ತಿರುಜ್ಞಾನ ಸಂಬಂಧಂ ನಮ್ಮಣ್ಣನ ಬುದ್ಧಿ ಕೆಡಿಸಿ, ಅವನನ್ನು ಪಾರ್ಟಿಗೆ ಸೇರಿಸಿದ."

"ವಾಸನ್‌ಗೆ ಮದುವೆಯಾಗಿಲ್ಲವೇ ?"

"ಇಲ್ಲ."

"ಜಯರಾಮ್ ಅವರಿಗೆ ?"

"ಅವರಿಗೆ ಮದುವೆಯಾಗಿದೆ. ಮಕ್ಕಳಿಲ್ಲ, ಅವರು ಇಂಗ್ಲೆಂಡಿಗೆ ಹೋಗುವ ಮೊದಲೇ ನನ್ನ ತಾಯಿ ತಂದೆ ಅವರ ಲಗ್ನಮಾಡಿದರು."

"ನಿಮ್ಮ ತಾಯಿ ತಂದೆ ಹಳೆಯ ಕಾಲದವರೇ ?"

"ತೀರ ಹಳೆಯ ಕಾಲದವರು ಮೋಹಿನಿ. ನಾನು ನಾಟ್ಯ ಕಲಿಯುವುದಕ್ಕೆ ಇಬ್ಬರೂ ಒಪ್ಪಲಿಲ್ಲ. ಜಯರಾಮಣ್ಣ ಇಂಗ್ಲೆಂಡಿನಿಂದ ಬಂದ ಮೇಲೆ ನನಗೆ ಅನುಮತಿ ದೊರೆಯಿತು."

"ಎಷ್ಟು ವಿಚಿತ್ರ ಕಲಾವತಿ-ನನ್ನ ಜೀವನ, ನಿಮ್ಮ ಜೀವನ ಒಂದೇ ವಿಧವಾಗಿದೆ. ನಮ್ಮ ತಾಯಿಯೂ ವಿಪರೀತ ಮಡಿ- ನಮ್ಮ ತಂದೆ ಹಾಗಿರಲಿಲ್ಲಾನ್ನಿ - ಅವರು ಬಹಳ ಲಿಬರಲ್-ಮೈಂಡೆಡ್ (Liberal-minded)."

"ನನ್ನ ತಂದೆ ಪೂರ್ವಾಚಾರಪ್ರಿಯರಾಗಿದ್ದರೂ, ಸಂಕುಚಿತ ಮನಸ್ಕರಾಗಿರಲಿಲ್ಲ ಮೋಹಿನಿ. ಅವರು ಘನ ವಿದ್ವಾಂಸರು. ತಮಿಳು ನಾಡಿನ ವಿದ್ವಾಂಸರು ನಮ್ಮ ತಂದೆಯರ ಕಂಬ ರಾಮಾಯಣ, ತಿರುಕುರುಳ್ ಗ್ರಂಥಗಳ ಪಾಂಡಿತ್ಯವನ್ನು ಮನಸಾರೆ ಮೆಚ್ಚಿಕೊಂಡಿದ್ದರು - ನೀವು ಅಡೆಯಾರಿನ ಹಸ್ತಪ್ರತಿ ಸಂಗ್ರಹ ನೋಡಿದ್ದೀರಾ ?"

"ಎಲ್ಲಿದೆ"

"ಲೈಬ್ರರಿಯಲ್ಲಿ."

"ಇಲ್ಲ ನೋಡಿಲ್ಲ"

“ನಾಳೆ ಲೈಬ್ರರಿಗೆ ಹೋಗಿ ಬರುವ ಬನ್ನಿ- ಅಡೆಯಾರ್ ಲೈಬ್ರರಿಯವರು ಕಂಬರಾಮಾಯಣ ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸುವ ಕೆಲಸ ಕೈಗೊಂಡಿದ್ದಾರೆ. ಅದಕ್ಕೆ ನಮ್ಮ ತಂದೆಯವರು ತಮ್ಮ ಲೈಬ್ರರಿಯಲ್ಲಿದ್ದ ಹದಿನಾರು ಹಸ್ತಪ್ರತಿಗಳನ್ನು ದಾನ ಮಾಡಿದ್ದಾರೆ.”

“ನಿಮ್ಮ ಮನೆಯಲ್ಲಿ ಒಳ್ಳೆಯ ಲೈಬ್ರರಿ ಇದೆಯೇ ?”

“ಇದೆ. ಲೈಬ್ರರಿ ಮತ್ತು ಶಿಲ್ಪ ವಸ್ತುಗಳಿಗಾಗಿ ನಮ್ಮ ತಂದೆಯವರು ಲಕ್ಷಾಂತರ ರೂಪಾಯಿ ವೆಚ್ಚ ಮಾಡಿದ್ದಾರೆ. ಅವರು ಸಂಗ್ರಹಿಸಿರುವ 'ಪ್ರಾಚೀನ ಭಾರತೀಯ ವಾದ್ಯಗಳು' ಭಾರತದ ಯಾವ ಮ್ಯೂಸಿಯಂನಲ್ಲೂ ಸಿಕ್ಕುವುದಿಲ್ಲ.”

“ನನ್ನನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿ ಇವುಗಳನ್ನೆಲ್ಲಾ ತೋರಿಸುವುದಿಲ್ಲವೇನ್ರೀ ?”

“ಖಂಡಿತ ಕರೆದುಕೊಂಡು ಹೋಗುತ್ತೇನೆ ಮೋಹಿನಿ. ನೀವು ನಮ್ಮ ತಾಯಿಯವರನ್ನು ನೋಡಬೇಕು. ಹೆಸರಿಗೆ ತಕ್ಕಂತೆ ಆಕೆ ವೇದವತಿಯೇ ! ನಮ್ಮ ತಾಯಿಯವರಿಗೆ ಸಂಸ್ಕೃತದಲ್ಲಿ ಒಳ್ಳೆಯ ಪಾಂಡಿತ್ಯವಿದೆ”

“ಎಂಥ ಸೊಗಸಾದ ಸಂಸಾರ ನಿಮ್ಮದು”

“ನಿಮ್ಮ ವಿಷಯ ಹೇಳಲೇ ಇಲ್ಲವಲ್ಲ !”

ಕಲಾವತಿಗೆ ಹೇಳಬಹುದಾದಷ್ಟನ್ನು ಮಾತ್ರ ಮೋಹಿನಿ ನಿರೂಪಿಸಿದಳು.

“ಅವತ್ತು ನಿಮ್ಮೊಂದಿಗೆ ಬಂದಿದ್ದವರು ನಿಮ್ಮ ಅಂಕಲ್ಲೇ ?”

“ಹೌದು. ಕಲಾವತಿ. ನನ್ನ ತಂದೆಯವರ ತಮ್ಮ. ತಂದೆಗಿಂತಲೂ ಹೆಚ್ಚಾಗಿ ಇವರು ನನ್ನನ್ನು ನೋಡಿಕೊಳ್ಳುತ್ತಿದ್ದಾರೆ.”

“ಬಹಳ ಒಳ್ಳೆಯವರ ಹಾಗೆ ಕಾಣುತ್ತಾರೆ”

“ತುಂಬ ಒಳ್ಳೆಯವರಮ್ಮ. ನನ್ನ ತಾಯಿ ಏನೂ ಅರಿಯದ ಪ್ರಾಣಿ. ಇವರು ಸಹಾಯ ಮಾಡದಿದ್ದರೆ ನಮ್ಮ ಪಾಡು ಏನಾಗುತ್ತಿತ್ತೋ ?”

“ನಿಮ್ಮ ಅಂಕಲ್ ಏನು ಮಾಡುತ್ತಿದ್ದಾರೆ.”

“ಬಿಸಿನೆಸ್ ಮಾಡುತ್ತಿದ್ದಾರೆ. ಕಾಂಗ್ರೆಸ್ಸಿನ ಮುಖಂಡರಾಗಿದ್ದಾರೆ.”

“ನೀವು ನಾಟ್ಯ ಕಲಿಯುವುದಕ್ಕೆ ನಿಮ್ಮ ತಾಯಿ ಒಪ್ಪಿದರೇ ?”

“ಮೊದಲು ಒಪ್ಪಲಿಲ್ಲ. ಅಂಕಲ್ ಅವರನ್ನು ಒಪ್ಪಿಸಿದರು.”

"ನಿಮ್ಮಿಂದ ನನಗೊಂದು ಉಪಕಾರವಾಗಬೇಕು ಮೋಹಿನಿ "

"ಹೇಳ್ರೀ - ನೀವು ಏನು ಹೇಳಿದರೂ ಮಾಡುತ್ತೇನೆ"

"ನನಗೆ ನಿಮ್ಮ ಕನ್ನಡ ದೇವರ ನಾಮಗಳ ಮೇಲೆ ತುಂಬ ಪ್ರೀತಿ - ಈಗ್ಗೆ ಕೆಲವು ವರ್ಷಗಳ ಕೆಳಗೆ ಗಾನಕಲಾ ಭೂಷಣಿ ಲಲಿತಾಂಗಿ ಎನ್ನುವವರು 'ಪುರಂದರ ಮಣಿಮಾಲಾ' ಎನ್ನುವ ಪುಸ್ತಕ ಪ್ರಕಟಿಸಿದರು. ಅದರಲ್ಲಿ ಪುರಂದರ ದಾಸರ ನಲವತ್ತು ಕೀರ್ತನೆಗಳ ಸ್ವರ ಪ್ರಸ್ತಾರ ಹಾಕಿದ್ದಾರೆ - ನಾನು ಲಲಿತಾಂಗಿಯವರಿಂದರೇ ಕೆಲವು ಕೀರ್ತನೆಗಳನ್ನು, ಹೇಳಿಸಿಕೊಂಡೆ. ಈಗ ಟೈಗರ್ ವರದಾಚಾರ್ಯರಿಂದ ಕೆಲವು ಕೀರ್ತನೆಗಳನ್ನು ಹೇಳಿಸಿಕೊಳ್ಳುತ್ತಿದ್ದೇನೆ. ಅವುಗಳನ್ನು ಅಭಿನಯಕ್ಕೆ ಅಳವಡಿಸಬೇಕೆಂಬುದೇ ನನ್ನಾಸೆ ನೀವು ನನಗೆ ಈ ಕೀರ್ತನೆಗಳ ಶುದ್ಧ ಪಾಠಗಳನ್ನು ಹೇಳಿಕೊಡಬೇಕು ತಮಿಳರು - ನಮ್ಮ ಬಾಯಲ್ಲಿ ನಿಮ್ಮ ಕನ್ನಡ ಸರಿಯಾಗಿ ಬರುವುದಿಲ್ಲ."

"ಇಷ್ಟೇ ತಾನೆ ಅಗತ್ಯವಾಗಿ ಹೇಳಿಕೊಡುತ್ತೇನೆ - ನನಗೂ ಕೆಲವು ದೇವರ ನಾಮಗಳು ಬರುತ್ತವೆ. ಅವುಗಳನ್ನು ಹೇಳಿಕೊಡುತ್ತೇನೆ. ನೀವು ನನಗೆ ತಿರುಪ್ಪು. ತೇವಾರಗಳನ್ನು ಹೇಳಿಕೊಡಿ."

"ಅಗತ್ಯವಾಗಿ ಆಗಲಿ"

ಎಂದು ಕಲಾವತಿ ಸಂತೋಷವಾಗಿ ಒಪ್ಪಿಕೊಂಡಳು.

ಕಲಾವತಿಯ ದೈನಂದಿನ ಜೀವನೆ, ವಿಚಾರಧಾರೆ, ಸೌಜನ್ಯಭರಿತವಾದ ಮೃದು ಮಾತುಗಾರಿಕೆ ಕಂಡು ಮೋಹಿನಿಗೆ ದಿಗ್ಭ್ರಮೆಯಾಯಿತು.

ಇತರರ ಬಗ್ಗೆ ಅಪಶಬ್ದ ನುಡಿಯುವುದನ್ನು ಕಲಾವತಿ ಕಂಡರಿಯಳು. ಅವಳ ಮನಸ್ಸು ಸದಾ ಉದಾತ್ತ ವಿಚಾರಗಳ ಚಿಂತನೆಯಲ್ಲಿ ಮಗ್ನವಾಗಿರುತ್ತಿತ್ತು.

ಕಲಾವತಿ ಒಂದು ನಿಮಿಷನನ್ನೂ ನಿಷ್ಫಲವಾಗಿ ಕಳೆಯುತ್ತಿರಲಿಲ್ಲ. ಸ್ವಲ್ಪ ಬಿಡುವು ಸಿಕ್ಕಿದರೆ ಸಾಕು, ಯಾವದಾದರೂ ಒಳ್ಳೆಯ ಪುಸ್ತಕ ಕೈಗೆತ್ತಿಕೊಳ್ಳುತ್ತಿದ್ದಳು.

ತನ್ನ ಕಾವ್ಯಾನಂದದ ಪಾಲನ್ನು ಒಮ್ಮೊಮ್ಮೆ ಕಲಾವತಿ ಮೋಹಿನಿಗೆ ಕೊಡುತ್ತಿದ್ದಳು.

ತಾನು ಓದುತ್ತಿದ್ದ ಕಾವ್ಯದ ಯಾವದಾದರೂ ಭಾಗ ಮನಸ್ಸಿಗೆ ಮುದವೆನಿಸಿದರೆ, ಅದನ್ನು ಮೋಹಿನಿಗೆ ಓದಿ ಹೇಳುತ್ತಿದ್ದಳು.

ಒಂದು ದಿನ ಕಲಾವತಿ ಓದಿದ ಅವ್ವೆಯಾರಳ ಒಂದು ಕಾವ್ಯಭಾಗವನ್ನು ಕೇಳಿದ ಮೋಹಿನಿ,

"ಎಷ್ಟು ಚೆನ್ನಾಗಿ ಓದಿ ಅರ್ಥ ವಿವರಿಸುತ್ತೀರಿ ಕಲಾವತಿ" ಎಂದಳು.

"ಅಯ್ಯೋ ನನ್ನದೇನ್ರೀ ಮಹಾ! ನಮ್ಮ ಅತ್ತಿಗೆ ವಿಶಾಲಾಕ್ಷಿ ಓದುವುದನ್ನು ನೀವು ಕೇಳಬೇಕು. ಅವರ ಜತೆ ತಮಿಳು ಮಾತನಾಡುವುದಕ್ಕೆ ನಮಗೆ ನಾಚಿಕೆಯಾಗುತ್ತದೆ.-"

"ಏಕೆ?"

"ಅತ್ತಿಗೆ ತೌರುಮನೆ ಮಧುರೆ. ಮಧುರೆಯ ತಮಿಳು ಪರಿಶುದ್ಧವಾದುದು- ಅದಕ್ಕೆ ಶನ್‌ತಮಿಳ್ ಎಂದು ಹೆಸರು."

"ಬಹಳ ದಿನಗಳಿಂದ ನಿಮ್ಮನ್ನು ಒಂದು ಪ್ರಶ್ನೆ ಕೇಳಬೇಕೆಂದಿದ್ದೇನೆ ಕಲಾವತಿ. ನೀವು ಬೇಸರಪಟ್ಟುಕೊಳ್ಳಬಹುದೆಂದು ಕೇಳಲಿಲ್ಲ."

"ಬೇಸರವೇಕೆ- ಕೇಳಿ?"

"ನೀವು ಡಿಗ್ರಿ ತೆಗೆದುಕೊಂಡ ಮೇಲೂ ಏಕೆ ಲಗ್ನವಾಗಲಿಲ್ಲ."

"ಆ ವಿಷಯ ನಾನು ತಿಳಿಸಿದರೆ ನೀವು ನಗುತ್ತೀರಿ."

"ಇಲ್ಲ. ಹೇಳಿ."

“ಒಂದು ಸಲ ನಮ್ಮ ತಂದೆಯನರು ಗೋರಖಪುರದ 'ಗೀತಾ ಪ್ರೆಸ್' ಪ್ರಕಟನೆಗಳನ್ನೆಲ್ಲಾ ವಿ.ಪಿ. ಮೂಲಕ ತರಿಸಿದರು. ಆ ಕಟ್ಟಿನಲ್ಲಿದ್ದ 'ಮೀರಾ ಕಥೆ (Story of Mira)' ಎನ್ನುವ ಪುಸ್ತಕವನ್ನು ನನಗಿತ್ತು 'ಕಲಾ, ಇದು ನಾನು ನಿನಗೆ ಕೊಡುವ ಅಮೌಲ್ಯ ಉಡುಗೊರೆ' ಎಂದರು. ನಾನು ಆ ಗ್ರಂಥವನ್ನು ಹತ್ತಾರು ಬಾರಿ ಓದಿದೆ. ಶ್ರೀಹರಿ ಚರಣವಾಸಿನಿಯಾದ ಮೀರಳ ಜೀವನ ನನ್ನ ಮನಸ್ಸಿನ ಮೇಲೆ ಅದ್ಭುತ ಪರಿಣಾಮವನ್ನುಂಟು ಮಾಡಿತು. 'ನಾನೂ ಮೀರಳ ಹಾಗೇ ಏಕಾಗಬಾರದು? ನೃತ್ಯ, ಗೀತೆ ಕಲಿತು ಶ್ರೀಕೃಷ್ಣನನ್ನೇಕೆ ಅರ್ಚಿಸಬಾರದು' ಎಂದುಕೊಂಡೆ. ನೃತ್ಯ, ಸಂಗೀತ ಕಲಿಯುವ ಆಸೆ ನನ್ನಲ್ಲಿ ಅಂಕುರಿಸಿದುದಾದರೂ ಹೀಗೆ !

ಅಣ್ಣ ಇಂಗ್ಲೆಂಡಿನಿಂದ ಬಂದ ಮೇಲೆ ನನ್ನ ಲಗ್ನದ ವಿಷಯ ಅಮ್ಮ ಅವರ ಹತ್ತಿರ ಪ್ರಸ್ತಾಪಿಸಿದರು. ಅಣ್ಣ ನನ್ನ ಅಭಿಪ್ರಾಯ ಕೇಳಲು ನಾನು ಮನಸ್ಸಿನಲ್ಲಿದ್ದುದನ್ನು ಅವರಿಗೆ ಹೇಳಿದೆ.

ಒಂದು ದಿನ ಅಮ್ಮ ಅಣ್ಣನವರನ್ನು ನನ್ನ ಮುಂದೆಯೇ ಆಕ್ಷೇಪಿಸಿ 'ಬೆಳೆದ ಹುಡುಗಿಯನ್ನು ಎಷ್ಟು ದಿನ ಹೀಗೆ ಮನೆಯಲ್ಲಿಟ್ಟುಕೊಂಡಿರುವುದು ಜಯರಾಮ್. ಕಲಾ ಲಗ್ನದ ವಿಷಯ ನೀನೂ ಯೋಚಿಸದೆ ಸುಮ್ಮನಾಗಿ ಬಿಟ್ಟಿದ್ದೀ' ಎಂದರು.

'ನನಗಿರುವ ಒಬ್ಬ ತಂಗಿ ನನಗೆ ಭಾರವಿಲ್ಲಮ್ಮ.'

'ನಿನಗೆ ಭಾರವೆಂದು ನಾನು ಹೇಳಲಿಲ್ಲ. ವಯೋಧರ್ಮಕ್ಕನುಗುಣವಾಗಿ ಅವಳಿಗೆ ಲಗ್ನವಾಗಬೇಡವೇ?'

'ಆಗಬೇಕು - ಅವಳು ಒಪ್ಪಿದರೆ ?'

'ಅವಳು ಒಪ್ಪದೆ ಏನು ?'

'ನಾನು ಕೇಳಿ ನೋಡಿದೆ - ಅವಳು ಒಪ್ಪುವುದಿಲ್ಲ.'

'ಏಕಂತೆ ?'

'ಅವಳು ನೃತ್ಯ, ಸಂಗೀತ ಕಲಿಯಬೇಕಂತೆ !'

'ಎಲ್ಲಿಯಾದರೂ ಉಂಟೇ ಜಯರಾಮ್ - ನಾವೇನು ತೇವಡಿಗಳು ಕೆಟ್ಟುಹೋದವೇ?'

'ರಾಮಾಯಣ, ಮಹಾಭಾರತದ ರಾಜಕುಮಾರಿಯರೆಲ್ಲಾ ನೃತ್ಯ ಗೀತಾ ಪ್ರವೀಣೆಯರಾಗಿದ್ದರೆಂದು ನೀನೇ ಓದುವೆಯಲ್ಲಮ್ಮ.'

'ಆ ಕಾಲ ಬೇರೆ . ಈ ಕಾಲ ಬೇರೆ ಜಯರಾಮ್.'

'ತೇವಡಿಗಳ ಕೈಗೆ ಸಿಕ್ಕಿ ನೃತ್ಯ, ಗೀತಕ್ಕೆ ಅಪಕೀರ್ತಿ ಬಂದಿದೆ. ರುಕ್ಮಿಣಿದೇವಿಯವರ ಹಾಗೆ ಸದ್ಗೃಹಿಣಿಯ ಅದನ್ನು ಕೈಗೆ ತೆಗೆದುಕೊಂಡರೆ ಅಪಕೀರ್ತಿ ಅಳಿಸಿಹೋಗುತ್ತದೆ.'

'ಕಲಾ ಈ ಪಾಪದಮಾರ್ಗ ಹಿಡಿಯುವುದಕ್ಕೆ ನಾನು ಅವಕಾಶಕೊಡುವುದಿಲ್ಲ ಜಯರಾಮ್.'

ಕ್ಷಣಕಾಲ ಮೌನ ತಳೆದು ಕುಳಿತ ನಮ್ಮ ಅಣ್ಣನವರು,

'ಅಮ್ಮಾ ತಾಯಿಯೇ ಮಕ್ಕಳಲ್ಲಿ ನಂಬಿಕೆಯಿಡದಿದ್ದರೆ ಬೇರೆ ಯಾರು ಇಡುತ್ತಾರೆ. ನಾನು ಹೇಗೆ ಹದಿನಾರಾಣೆ ಭಾಗ ನಿನ್ನ ಮಗನೋ, ಹಾಗೆ ಕಲಾ ಹದಿನಾರಾಣೆ ಭಾಗ ನಿನ್ನ ಮಗಳು. ನಾನು ಇಂಗ್ಲೆಂಡಿಗೆ ಹೊರಟಾಗ 'ಅಪೇಯಪಾನ, ಅಭಕ್ಷ್ಯಭೋಜನ, ಅಗಮ್ಯ ಗಮನ ಮಾಡುವುದಿಲ್ಲ' ಎಂದು ನಿನಗೆ ಮಾತು ಕೊಟ್ಟೆ. ಅದನ್ನು ಅಕ್ಷರಶಃ ಪಾಲಿಸಿದೆ. ಲಂಡನ್ನಿನಲ್ಲಿದ್ದರೂ ನಾನು ಜನಿವಾರ ಕಿತ್ತು ಹಾಕಲಿಲ್ಲ - ಸಂಧ್ಯಾವಂದನೆ ಬಿಡಲಿಲ್ಲ. ಲಂಡನ್ನಿನಲ್ಲಿ ಕೋಟು, ಷರಾಯಿ, ಓವರ್ ಕೋಟ್ ಹೊಲಸಿಕೊಂಡು ಧರಿಸುತ್ತಿದ್ದೆ - ಆದರೆ ನಿನ್ನ ಸಂದೇಶ ಮರೆಯಲಿಲ್ಲ. ನನ್ನ ಸಂಸ್ಕಾರಕ್ಕೆ ಅಪಮಾನವಾಗುವ ರೀತಿ ವರ್ತಿಸಲಿಲ್ಲ.'

'ನಿಜ ನಿಜ - ನೀನು ಗಂಡಸು - ಕಲಾ ಹೆಂಗಸು.'

'ಗಂಡಸಿನ ಮನೋದಾರ್ಢ್ಯಕ್ಕಿಂತಲೂ, ಹೆಂಗಸಿನ ಮನೋದಾರ್ಢ್ಯ ಶ್ರೇಷ್ಠವಾದುದಮ್ಮ. ಕಲೆಯ ಇಷ್ಟಕ್ಕೆ ವಿರೋಧವಾಗಿ ಹೋಗುವುದು ಬೇಡ. ಅವಳು ತಪ್ಪು ಹಾದಿ ತುಳಿಯುವುದಿಲ್ಲವೆಂದು ನಾನು ನಿನಗೆ ಭರವಸೆಕೊಡಬಲ್ಲೆ'

ಎಂದು ಹೇಳಿದರು.

ಅಂದಿಗೇ ನನ್ನ ಮದುವೆಯ ಮಾತು ನಿಂತುಹೋಯಿತು."

"ಕಲಾ, ಅಣ್ಣಾ ಎಂದರೆ ನಿಮಗೆಷ್ಟು ಆಭಿಮಾನ - ಎಷ್ಟು ಪ್ರೀತಿ."

"ನನ್ನ ಪ್ರೀತಿ ಅವರ ಪ್ರೀತಿಯಲ್ಲಿ ಒಂದಂಶವಿಲ್ಲ ಕಣ್ರೀ. ಇಂದಿಗೂ ನಾನು ಅವರ ಕಣ್ಣಿಗೆ ಪುಟ್ಟ ತಂಗಿ - ಎಳೆಯ ಮಕ್ಕಳನ್ನಾಡಿಸುನಂತೆ ನನ್ನನ್ನು ಆಡಿಸುತ್ತಾರೆ."

"ನಿಮ್ಮ ಮನೆ - ನಿಮ್ಮ ಜನಗಳನ್ನು ನಾನು ನೋಡಬೇಕ್ರೀ."

"ಕರೆದುಕೊಂಡು ಹೋಗುತ್ತೇನಮ್ಮ"

ಎಂದು ಕಲಾ ಆಶ್ವಾಸನವಿತ್ತಳು.

# ೧೪

ಎರಡು ವಾರ ಕಳೆಯಿತು.

ಸಾಹುಕಾರರಿಂದ ಮೋಹಿನಿಗೆ ಕಾಗದ ಬಂದಿರಲಿಲ್ಲ.

ಅವಳ ಮನಸ್ಸು ಕಳವಳಕ್ಕೀಡಾಯಿತು.

ಒಂದು ದಿನ ಮೋಹಿನಿ, ಕಲಾವತಿ ಕ್ಲಾಸ್ ಮುಗಿಸಿಕೊಂಡು ಹಾಸ್ಟೆಲ್ ಕಡೆಗೆ ಹೊರಟಿದ್ದರು.

"ನನ್ನ ಅಂಕಲ್ಲಿಂದ ಈಚೆಗೆ ಕಾಗದವೇ ಇಲ್ಲ ಕಲಾವತಿ. ಆಫೀಸಿಗೆ ಹೋಗಿ ಟ್ರಂಕ್‌ಕಾಲ್ ಮಾಡಿ ಬರುತ್ತೇನೆ - ನೀವೂ ಬನ್ನಿ."

"ಬೇಡಿ. ನಾನು ಹಾಸ್ಟಲ್ಲಿನಲ್ಲಿರುತ್ತೇನೆ - ನೀವು ಟ್ರಂಕ್ ಕಾಲ್ ಮಾಡಿ ಬನ್ನಿ" ಎಂದಳು.

ಆಫೀಸಿಗೆ ಬಂದ ಮೋಹಿನಿ, ಟ್ರಂಕ್‌ಕಾಲ್ ಮಾಡಬೇಕೆಂದು ದಾಮೋದರನ್ ಅವರಿಗೆ ಹೇಳಲು, 'ಮಾಡಿ' ಎಂದು ತಿಳಿಸಿ, ದಾಮೋದರನ್ ಹೊರಗೆದ್ದುಹೋದರು.

ಮೋಹಿನಿ 'ದಿಲ್‌ರುಬಾ' ಬಂಗಲೆಗೆ ಪಿ.ಪಿ, ಕಾಲ್ ಮಾಡಿದಳು.

ಕಾಲುಗಂಟೆಯ ತರುವಾಯ ಅತ್ತಣಿಂದ,

'ಯಾರು?'

ಎಂಬ ಧ್ವನಿ ಬಂತು.

'ನಾನು ಅಂಕಲ್ - ಮೋಹಿನಿ.'

ಸಾಹುಕಾರರು ನಕ್ಕು,

'ಸಾಕುಮಾಡೇ ನಿನ್ನ ಅಂಕಲ್ ನಾಟಕ - ಏನು ಸಮಾಚಾರ.'

'ಹದಿನೈದು ದಿನವಾಯಿತು - ನೀವು ಬರಲೂ ಇಲ್ಲ ಕಾಗದವೂ ಬರೆಯಲಿಲ್ಲ.'

'ಇಲ್ಲಿ ಕ್ಯಾಬಿನೆಟ್ ಕ್ರೈಸಿಸ್ (cabinet crisis) ಎದ್ದಿದೆ ಮೋಹಿನಿ. ಸದ್ಯಕ್ಕೆ ಊರು ಬಿಡುವಂತಿಲ್ಲ.'

'ಯಾವಾಗ ಬರುವಿರಿ ?'

'ಮುಂದಿನ ತಿಂಗಳು ಮೊದಲನೆಯ ವಾರ.'

'ಇನ್ನು ಇಪ್ಪತ್ತು ದಿವಸ....'

'ಹೂ !'

'ನೀವು ಬಲೆ ಸುಳ್ಳು ಹೇಳುತ್ತೀರ್ರೀ !'

'ಇಲ್ಲ ಮೋಹಿನಿ - ಸುಳ್ಳಲ್ಲ - ಸರ್ಕಾರದ ಬುಡ ಅಲುಗಾಡುತ್ತಿದೆ. ಏನಾದರೂ ಮಾಡಿ ನಾನು ಅದನ್ನು ಉಳಿಸಬೇಕಾಗಿದೆ. ಇನ್ನೇನು ವಿಶೇಷ?'

ಆಪರೇಟರ್ ಮಧ್ಯೆ ಬಾಯಿ ಹಾಕಿ,

'ಮೂರು ನಿಮಿಷವಾಯಿತು' ಎಂದ.

'ಕಾಲ್ ಮುಂದುವರಿಸಿ'

ಎಂದು ಹೇಳಿ ಮೋಹಿನಿ,

'ನನಗೊಳ್ಳೆಯ ರೂಮ್‌ಮೇಟ್ ಸಿಕ್ಕಿದ್ದಾಳೆ. ನೀವು ಬಂದಾಗ ಅವಳನ್ನು ಇಂಟ್ರಡ್ಯೂಸ್ (inrtoduce) ಮಾಡುತ್ತೇನೆ. ಒಳ್ಳೆಯ ಮನೆತನದ ಹುಡುಗಿ - ತುಂಬ ಓದಿಕೊಂಡಿದ್ದಾಳೆ."

'ನಾನು ಬಂದಾಗ ಇಂಟ್ರಡ್ಯೂಸ್ ಮಾಡುವೆಯೆಂತೆ !'

'ಅವಳಿಗೂ ಅಂಕಲ್ ಆಗುತ್ತೀರೋ ?'

'ಹುಚ್ಚಿ.'

'ಇವತ್ತು ಸಂಜೆ ನಾನು ಅವಳ ಮನೆಗೆ ಹೋಗುತ್ತೇನೆ.'

'ಅವಳ ಮನೆಯೆಲ್ಲಿ?'

'ಮೈಲಾಪೂರ್.'

'ನಿನ್ನ ಪಾಠ ಹೇಗೆ ಸಾಗಿದೆ.'

'ಚೆನ್ನಾಗಿ ನಡೆದಿದೆ. ನಿಮ್ಮ ಪ್ರೈವೇಟ್ ಸೆಕ್ರೆಟರಿ ಹೇಗಿದ್ದಾರೆ ?'

'ಚೆನ್ನಾಗಿದ್ದಾನೆ - ಇಲ್ಲೇ ಇದ್ದಾನೆ - ಮಾತನಾಡುವೆಯೇನು?'

'ಏನೂ ಬೇಡಿ - ನೀವು ಬೇಗ ಬನ್ನಿ'

ಮತ್ತೆ ಆಪರೇಟರ್ ಬಾಯಿ ಹಾಕಿ,

'ಕಾಲ್ ಮುಂದುವರಿಸಲೇ ?' ಎಂದು ಕೇಳಿದ.

'ಬೇಡಿ - ಥ್ಯಾಂಕ್ಸ್ (Thanks)'

ಎಂದು ಹೇಳಿ ಮೋಹಿನಿ ರಿಸೀವರ್ ಕೆಳಗಿಟ್ಟಳು.

ಒಳಗೆ ಬಂದ ದಾಮೋದರನ್.

"ಕಾಲ್ ಮುಗಿಯಿತೇಮ್ಮ?" ಎಂದು ಕೇಳಿದರು.

"ಆಯಿತು ಸಾರ್ - ಥ್ಯಾಂಕ್ಸ್- ಆರು ನಿಮಿಷ ಮಾತನಾಡಿದ್ದೇನೆ - ಚಾರ್ಜ್ ಕೊಡಲೇ ?"

"ಈಗಲೇ ಬೇಡ - ಬಿಲ್ ಬರಲಿ"

ಎಂದು ಹೇಳಿದರು.

ಸಾಹುಕಾರರ ಮುಖಭಾವ ಪರೀಕ್ಷಿಸುತ್ತಿದ್ದ ಲೋಕಾಭಿರಾಮ,

"ಏನು ಸ್ವಾಮಿ ಸಮಾಚಾರ?" ಎಂದ.

"ಕೂಡಲೆ ಬಾ ಎಂದು ಬಮ್ಮಡಿ ಬಜಾಯಿಸುತ್ತಿದ್ದಾಳೋ ಲೋಕಾಭಿ."

"ನಡೀರಿ ಸ್ವಾಮಿ- ಹೋಗಿ ಬರೋಣ."

"ಈಗ ನಾನು ಊರು ಬಿಟ್ಟಿರೂ ಸರಿಯೇ !"

ಕ್ಷಣಕಾಲ ಆಲೋಚಿಸಿದ ಲೋಕಾಭಿ,

"ಮದರಾಸಿಗೆ ನೀವು ಹೊರಡದಿದ್ದರೆ ನಾನು ಮೈಸೂರಿಗೆ ಹೋಗಿ ಬರುತ್ತೇನೆ."

"ಏಕೆ?"

"ಸ್ವಲ್ಪ ಭತ್ತ ಬರುವುದಿದೆ - ತಂದುಬಿಡುತ್ತೇನೆ."

"ಹೋಗಿ ಬಾ ಯಾವಾಗ ಬರುತ್ತೀ ?"

"ನಾಲ್ಕೈದು ದಿನಗಳಲ್ಲಿ."

"ಹಾಗೇ ಮಾಡು" ಎಂದರು.

ನಾಲ್ಕು ಗಂಟೆಗೆ ಬಸ್ ಸ್ಟ್ಯಾಂಡಿಗೆ ಬಂದ ಲೋಕಾಭಿರಾಮ ಟಿಕೆಟ್‌ಕೊಂಡು ಬಸ್ಸಿನಲ್ಲಿ ಕುಳಿತ.

ಕಾವೇರಿ ಎಕ್ಸ್‌ಪ್ರೆಸ್ಸಿನಲ್ಲಲ್ಲ !

ನಿಟ್ಟೂರು ಪ್ಯಾಸೆಂಜರಿನಲ್ಲಿ !!

ಅದೇ ಸಂಜೆ ಕಲಾವತಿ, ಮೋಹಿನಿಯನ್ನು ತನ್ನ ಮನೆಗೆ ಕರೆದೊಯ್ದಳು.

ಕಾಂಪೌಂಡ್ ಪ್ರವೇಶಿಸಿದೊಡನೆಯೇ ಮೋಹಿನಿ,

"ನಿಮ್ಮ ಕಾಂಪೌಂಡ್ ಎಷ್ಟು ವಿಶಾಲವಾಗಿದೆ ಕಲಾವತಿ."

"ನಾಲ್ಕು ಎಕರೆ ಇದೆ ಮೋಹಿನಿ."

ಇಬ್ಬರೂ ಒಳಗೆ ಪ್ರವೇಶಿಸಿದ ಕೂಡಲೆ ವೇದಾವತಿಯಮ್ಮ ಬಂದು ಮಗಳನ್ನೂ, ಮಗಳ ಗೆಳತಿಯನ್ನೂ ಸ್ವಾಗತಿಸಿದರು.

ಮೋಹಿನಿ, ಕಲಾವತಿಯ ಪರಿಚಯ ತಾಯಿಗೆ ಮಾಡಿಕೊಟ್ಟ ಮೇಲೆ ವೇದಾವತಿಯಮ್ಮ.

"ಬಾಮ್ಮ ನಮ್ಮ ಮಗಳ ಸ್ನೇಹಿತಳೂ ನಮ್ಮ ಮಗಳೇ" ಎಂದರು.

"ಅಣ್ಣಂದಿರೆಲ್ಲಮ್ಮ?"

"ಜಯರಾಮ್ ಆಫೀಸಿನಲ್ಲಿದ್ದಾನೆ. ವಾಸೂ ಇನ್ನೂ ಮನೆಗೆ ಬಂದಿಲ್ಲ."

"ಒಂದು ನಿಮಿಷ ಅಮ್ಮನ ಜತೆ ಮಾತನಾಡತ್ತಿರಿ ಮೋಹಿನಿ, ಅಣ್ಣನನ್ನು ನೋಡಿಕೊಂಡು ಬಂದು ಬಿಡುತ್ತೇನೆ."

ಎಂದು ಕಲಾವತಿ ತನ್ನ ಅಣ್ಣನ ರೂಮಿಗೆ ಹೋದಳು

ಬ್ಯಾರಿಸ್ಟರ್ ಜಯರಾಮ್, ತಂಗಿಯ ಕೈ ಹಿಡಿದುಕೊಂಡೇ ಹೊರಗೆ ಬಂದರು.

ಕಲಾವತಿ, ಮೋಹಿನಿಯ ಪರಿಚಯ ಮಾಡಿಕೊಡಲು.

"ನೀವು ಬಂದದ್ದು ಬಹಳ ಸಂತೋಷ ಮಿಸ್, ಮೋಹಿನಿ."

"ನಾನೂ ನಿಮ್ಮ ತಂಗಿ ಸಾರ್, ನನ್ನನ್ನು ಬಹುವಚನದಲ್ಲಿ ಮಾತನಾಡಿಸಬೇಡಿ. ಕಲಾವತಿಯ ಬಾಯಿಂದ ನಿಮ್ಮೆಲ್ಲರ ವಿಷಯ ಕೇಳಿ, ಇಲ್ಲಿಗೆ ಬರಲು ನಾನು ಕಾತರಳಾಗಿದ್ದೆ."

"ಏನೇನು ಹೇಳಿಬಿಟ್ಟಿದ್ದೀ ಡಾಲಿ."

"ಏನೂ ಇಲ್ಲಣ್ಣ- ನನ್ನ ಫ್ರೆಂಡ್‌ಗೆ ತಂದೆಯವರ ಆರ್ಟ್ ಕಲೆಕ್ಷನ್ (art collection) ತೋರಿಸು."

"ನೀನೇ ತೋರಿಸು."

"ನಿಮ್ಮ ಅತ್ತಿಗೆಯವರೆಲ್ಲಿ ಕಲಾವತಿ ?"

"ಆಡಿಗೆಮನೆ ಸೇರಿಬಿಟ್ಟಳೋ?"

ಎಂದು ಜಯರಾಮ್ ಒಳಗೆ ಹೋಗಿ ತಮ್ಮ ಹೆಂಡತಿಯನ್ನು ದರದರನೆ ಎಳೆದುಕೊಂಡು ಬಂದರು.

ವಿಶಾಲಾಕ್ಷಿ ನಗುತ್ತಾ,

"ನೋಡು ಕಲಾ - ನಿಮ್ಮಣ್ಣನ ಹುಚ್ಚಾಟ!" ಎಂದಳು.

ಜಯರಾಮ್ ತಂಗಿಯ ಕಡೆ ತಿರುಗಿ,

“ಡಾಲಿ, ನಿನ್ನ ಗೆಸ್ಟ್ (Guest) ನೋಡಿಕೋ - ಆಫೀಸಿನಲ್ಲಿ ಸ್ವಲ್ಪ ಕೆಲಸ ಇದೆ - ಮುಗಿಸಿಕೊಂಡು ಬರುತ್ತೇನೆ. ರಾತ್ರಿ ಎಲ್ಲರೂ ಒಟ್ಟಿಗೆ ಊಟಮಾಡೋಣ.”

“ಇಲ್ಲ ಅಣ್ಣ - ನಾನೂ ಮೋಹಿನಿ ರಾತ್ರಿಗೇ ಹಾಸ್ಟಲ್ಲಿಗೆ ಹೋಗಬೇಕು. ಬೆಳಿಗ್ಗೆ ಕ್ಲಾಸಿದೆ.”

“ಆಗಲಿ - ಆಗಲಿ”

ಎನ್ನುತ್ತಾ ಜಯರಾಮ್ ತಮ್ಮ ಆಫೀಸಿಗೆ ಹೋದರು.

ವಿಶಾಲಾಕ್ಷಿ ನಯವಾಗಿ,

“ಕಲಾ, ನೀನೂ ನಿನ್ನ ಫ್ರೆಂಡ್ (Friend) ಕುಳಿತುಕೊಳ್ಳಿ - ತಿಂಡಿ, ಕಾಫಿ ತಂದುಕೊಡುತ್ತೇನೆ.”

“ನೀನು ಕಾಫಿ ತರುವಷ್ಟರಲ್ಲಿ ನಾನು ಮೋಹಿನಿಗೆ ತಂದೆಯವರ ಆರ್ಟ್ ಕಲೆಕ್ಷನ್ ತೋರಿಸಿಕೊಂಡು ಬರುತ್ತೇನೆ ಅತ್ತಿಗೆ”

ಎಂದು ಮೋಹಿನಿಯನ್ನು ಮಹಡಿಯ ಮೇಲೆ ಕರೆದೊಯ್ದಳು.

ಮಹಡಿಯ ಮೇಲಿದ್ದ ವಿಶಾಲವಾದ ಹಜಾರದ ತುಂಬ ಕಪಾಟುಗಳು. ಮೂರು ಸಾಲಿನಲ್ಲಿದ್ದ ಕಪಾಟುಗಳಲ್ಲಿ ಪುಸ್ತಕಗಳು; ಇನ್ನೊಂದು ಸಾಲಿನಲ್ಲಿದ್ದ ಕಪಾಟುಗಳಲ್ಲಿ ಕಂಚಿನ ವಿಗ್ರಹಗಳು, ಶಿಲಾ ವಿಗ್ರಹಗಳು, ತಾಳೇಗರಿ ಹಸ್ತ ಪ್ರತಿಗಳು, ಗಂಧ ದಂತದ ಕತ್ತನೆಯ ಸಾಮಾನುಗಳು.

ಒಂದೊಂದರ ಇತಿಹಾಸವನ್ನು ವಿವರಿಸಿ ಕಲಾವತಿ ಪುಸ್ತಕಗಳ ಕಪಾಟಗಳನ್ನು ತೆಗೆದು ತಂದೆಯವರು ಸಂಗ್ರಹಿಸಿದ ಉದ್ಗ್ರಂಥಗಳು, ಅಮೌಲ್ಯ ಪುಸ್ತಕಗಳು, ಪ್ರಥಮಾವರ್ತಿ ಗ್ರಂಥಗಳನ್ನು ತೋರಿಸಿದಳು.

“ಇವುಗಳನ್ನು ಸಂಗ್ರಹಿಸಲು ನಿಮ್ಮ ತಂದೆಯವರು ಎಷ್ಟು ಕಷ್ಟಪಟ್ಟಿದ್ದಾರೆ ಕಲಾವತಿ”

“ಹೀಗೆ ಬನ್ನಿ ಮೋಹಿನಿ”

ಎಂದು ಕಲಾವತಿ ಅವಳನ್ನೊಂದು ರೂಮಿಗೆ ಕರೆದೊಯ್ದು ಅದರಲ್ಲಿದ್ದ ಔತ್ತರೇಯ, ದಾಕ್ಷಿಣಾತ್ಯ ಸಂಗೀತ ವಾದ್ಯಗಳನ್ನು ತೋರಿಸಿದಳು.

“ನಮ್ಮ ದೇಶದಲ್ಲಿ ಇಷ್ಟು ವಾದ್ಯಗಳಿವೆಯೆಂಬುದು ನನಗೆ ಗೊತ್ತೇ ಇರಲಿಲ್ಲ ಕಲಾವತಿ - ಇಲ್ಲಿಗೆ ಬಂದರೆ ಹೊರಗೆ ಹೋಗುವುದಕ್ಕೆ ಮನಸ್ಸಾಗುವುದಿಲ್ಲ.”

ಮಹಡಿಯ ಮೇಲಕ್ಕೆ ಬಂದ ವಿಶಾಲಾಕ್ಷಿ,

“ಕಲಾ, ಕೆಳಗೆ ಬರುವಿರೋ, ಇಲ್ಲ, ತಿಂಡಿ ಇಲ್ಲಿಗೇ ತಂದುಕೊಡಲೋ”

ಎಂದು ಕೇಳಿದಳು.

“ಬರುತ್ತೇವೆ ಅತ್ತಿಗೆ”

ಎಂದು ಕಲಾವತಿ, ಮೋಹಿನಿಯೊಂದಿಗೆ ಕೆಳಗಿಳಿದು ಬಂದಳು.

ವಿಶಾಲಾಕ್ಷಿ ಇಬ್ಬರಿಗೂ ತೈರೊಡೆ, ಕೊಬ್ಬರಿ ಮಿಠಾಯಿ, ಉಪ್ಪಿಟ್ಟು, ಕಾಫಿ ಇತ್ತು.

“ಕಲಾ, ನೀನು ನಿನ್ನ ಸ್ನೇಹಿತರು ಇಲ್ಲಿಯೇ ಊಟಮಾಡಿ. ನಾನು ಬೇಗ ಅಡಿಗೆ ಮಾಡುತ್ತೇನೆ” ಎಂದಳು.

“ಇಷ್ಟು ತಿಂಡಿ ತಿಂದ ಮೇಲೆ ಹಸಿವಾಗುತ್ತದೆಯೇ ಅತ್ತಿಗೆ – ಹಾಸ್ಟಲ್ಲಿಗೆ ಹೋಗಿ, ಅಲ್ಲೇ ಸ್ವಲ್ಪ ಮಜ್ಜಿಗೆ ಅನ್ನ ತಿನ್ನುತ್ತೇನೆ.”

ಎಂದು ಕಲಾವತಿ ಉತ್ತರಿಸಿದಳು.

ವೇದಾವತಿಯಮ್ಮನವರು ಮೋಹಿನಿಯ ಪಕ್ಕದಲ್ಲಿ ಕುಳಿತು, ಅವಳ ಮನೆಯ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡು,

“ದೂರ ಬಂದಿದ್ದೇನೆಂದು ಪೇಚಾಡಿಕೊಳ್ಳಬೇಡಮ್ಮ, ಹಾಸ್ಟಲ್ ಬೇಸರವಾದ ದಿನ ನೀನೂ, ಕಲಾ ಇಲ್ಲಿಗೆ ಬಂದುಬಿಡಿ”

ಎಂದು ಉಪಚರಿಸಿದರು.

ಸುಮಾರು ಎಂಟು ಗಂಟೆಗೆ ಇಬ್ಬರೂ ಹೊರಡಲನುವಾದರು,

ವೇದಾವತಿಯಮ್ಮನವರೇ ಹೋಗಿ ಮಗನನ್ನು ಕರೆದರು

“ಹೊರಡಬೇಕೇ ಕಲಾ?”

“ಹೋಗಬೇಕಣ್ಣಾ”

“ವಾಸೂನ ನೋಡದೆಯೇ ಹೋಗುವೆಯಾ?”

“ಅವನು ಎಷ್ಟು ಹೊತ್ತಿಗೆ ಬರುತ್ತಾನೋ ಏನೋ?”

“ಬನ್ನಿ - ನಾನು ಕಾರಿನಲ್ಲಿ ಕರೆದುಕೊಂಡು ಹೋಗಿ, ನಿಮ್ಮನು ಹಾಸ್ಟಲ್ ಮುಟ್ಟಿಸುತ್ತೇನೆ.”

ಎಂದು ಕಾರ್ ತರಲು ಹೋದರು.

ಮೋಹಿನಿ ಹಾರ್ದಿಕವಾಗಿ ವಿಶಾಲಾಕ್ಷಿಯ ಕೈ ಹಿಡಿದುಕೊಂಡು,

“ಬರುತ್ತೇನೆ.”

"ಒಂದು ದಿನ ಇರುವಂತೆ ಬನ್ನಿ ಮೋಹಿನಿ."

"ಅಗತ್ಯವಾಗಿ ಬರುತ್ತೇನೆ, ತಮಿಳು ಕಾವ್ಯ ನೀವು ಓದುವುದನ್ನೂ ಕೇಳಬೇಕು."

"ಅದನ್ನೂ ಕಲಾ ಹೇಳಿದ್ದಾಳೆಯೋ?"

ಎನ್ನುತ್ತಿರುವಂತೆ ಒಳಗೆ ಬಂದ ವಾಸನ್.

"ಡಾಲೀ- ಯಾವಾಗ ಬಂದೆ" ಎಂದ

"ಸಂಜೆ ಆರಕ್ಕೇ ಬಂದೆ ವಾಸಣ್ಣ."

"ಹೊರಟುಬಿಟ್ಟಿದ್ದೀಯಲ್ಲಾ!"

"ಹೋಗಬೇಕು ಬೆಳಿಗ್ಗೆ ಕ್ಲಾಸಿದೆ"

ಎಂದು ಮೋಹಿನಿಯ ಪರಿಚಯ ಮಾಡಿಕೊಟ್ಟಳು

"ಭಾನುವಾರ ನಿನ್ನ ಫ್ರೆಂಡನ್ನೂ ಕರೆದುಕೊಂಡು ಬಾ. ಡಾಲಿ, ಬೀಚ್‌ಗೆ ಹೋಗಿ ಬರೋಣ."

"ನೀನು ಮದರಾಸಿನ ಸ್ಟಾಲಿನ್- ನಿನಗೆಲ್ಲಪ್ಪಾ ಪುರಸತ್ತು."

"ನಾನು ಸ್ಟಾಲಿನ್ ಅಲ್ಲ ಡಾಲಿ - ಸಂಬಂಧಂ ಸ್ಟಾಲಿನ್."

"ನೀನು ?"

"ಮೋಲಟಾಫ್"

"ನಿಮ್ಮ ಲೆನಿನ್ ಯಾರು ವಾಸು."

"ಕಾಮ್ರೇಡ್ ಪಿ.ಸಿ. ಜೋಷಿ,"

ಕಲಾವತಿ ಗಹಗಹಿಸಿ ನಗಲು, ವಾಸನ್ ಸುಳ್ಳು ಕೋಪ ನಟಿಸುತ್ತ,

"ನಮ್ಮ ಪಾರ್ಟಿಯನ್ನು ನೀನು ಲೇವಡಿ ಮಾಡಬಾರದು ಡಾಲಿ" ಎಂದ.

ಹೊರಗೆ ಹಾರ್ನ್ (Horn) ಶಬ್ದವಾಗಲು ವಾಸನ್,

"ಅಣ್ಣ ಕಾಯುತ್ತಿದ್ದಾನೆ" ಎಂದ.

ಮೋಹಿನಿ ಎಲ್ಲರಿಗೂ ನಮಸ್ಕರಿಸಿ ಕಲಾವತಿಯೊಂದಿಗೆ ಹೊರಬಿದ್ದಳು.

ಜಯರಾಮನ್ ಅವರಿಬ್ಬರನ್ನೂ ಕರೆದೊಯ್ದು ಹಾಸ್ಟಲ್ಲಿನಲ್ಲಿ ಬಿಟ್ಟು ಹಿಂದಿರುಗಿದರು.

ನಿಟ್ಟೂರು ಬಸ್ ಸ್ಟ್ಯಾಂಡಿನಲ್ಲಿಳಿದು, ಲೋಕಾಭಿರಾಮ ಸಾಹುಕಾರ್ ನಂಜಯ್ಯನವರ ಮನೆಗೆ ಹೋದಾಗ ಸಾಹುಕಾರರು ಮನೆ ಜಗುಲಿಯ ಮೇಲೆ ಕುಳಿತುಕೊಂಡು ತಮ್ಮ ರೈತರೊಂದಿಗೆ ಮಾತನಾಡುತ್ತಿದ್ದರು.

ಅವರು ಕುಳಿತಿದ್ದ ಜಗಲಿಯ ಮೇಲೆ, ಸ್ವಲ್ಪ ದೂರದಲ್ಲಿ ಲೋಕಾಭಿರಾಮ ಹೋಗಿ ಕುಳಿತ.

ಸಾಹುಕಾರರು ಅವನನ್ನು ಮಾತೂ ಆಡಿಸಲಿಲ್ಲ; ಅವನತ್ತ ತಿರುಗಿಯೂ ನೋಡಲಿಲ್ಲ.

ರೈತರೂಂದಿಗೆ ವ್ಯವಹಾರ ಮುಗಿಸಿ, ಅವರನ್ನು ಅರ್ಧ ಗಂಟೆಯಲ್ಲಿ ಕಳುಹಿಸಿ ಸಾಹುಕಾರರು ತೆಪ್ಪಗೆ ಕುಳಿತರು.

"ನಮಸ್ಕಾರ ಸ್ವಾಮಿ"

ಸಾಹುಕಾರರು ಕತ್ತೆತ್ತಿ ನೋಡಿ,

"ಏನಯ್ಯಾ ಬಂದೆ" ಎಂದರು.

ಅವರ ಧ್ವನಿಯಲ್ಲಿ ಅಕ್ಕರವಾಗಲಿ, ಆದರವಾಗಲಿ ಇರಲಿಲ್ಲ.

"ಇಲ್ಲಿ ಹೇಗೆ ಹೇಳಲಿ? ಬನ್ನಿ ಹೊರಗೆ ಹೋಗೋಣ."

ಸಾಹುಕಾರರು ಹೆಗಲಮೇಲೆ ಮೊಣಕಾಲ್ಮೂರು ರೇಷ್ಮೆ ವಸ್ತ್ರ, ಹಾಕಿಕೊಂಡು ಅವನೊಂದಿಗೆ ಹೊರಟರು.

ಲೋಕಾಭಿರಾಮ ಮಾತು ಆರಂಭಿಸಲಿ ಎಂದು ಸಾಹುಕಾರರು ಮೌನ ತಳೆದಿದ್ದರು.

ಸಾಹುಕಾರರೇ ಮಾತು ಆರಂಭಿಸಲಿ ಎಂದು ಲೋಕಾಭಿರಾಮ ಸುಮ್ಮನಿದ್ದ.

ಸಾಹುಕಾರರು ತಮ್ಮಲ್ಲಿಯೇ ವಿಚಾರ ಮಾಡಿಕೊಂಡರು:

'ಇವನು ಪುನಃ ತಿರುಪೆಗೆ ಬಂದಿದ್ದಾನೆ !'

'ನನಗೆ ಕೈಕೊಟ್ಟ ಮೇಲೂ ಇವನು ಇಲ್ಲಿಗೆ ಬಂದಿರುವುದು ಆಶ್ಚರ್ಯಕರ !'

'ನನ್ನಿಂದ ಬಯ್ಯಿಸಿಕೊಳ್ಳುತ್ತೇನೆಂದು ತಿಳಿದೂ ಇವನು ಇಲ್ಲಿಗೆ ಬಂದಿರಬೇಕಾದರೆ ಮಹತ್ತ್ವದ ಕಾರ್ಯವಿರಬೇಕು.'

'ಇವನ ಸಂಬಂಧ ಮುಂದಕ್ಕೆ ಇಟ್ಟುಕೊಳ್ಳುವುದು ಬಿಡುವುದು ಮುಂದಕ್ಕೆ ಯೋಚಿಸಬಹುದು. ಇವನು ಏತಕ್ಕೆ ಬಂದಿದ್ದಾನೆ ವಿಚಾರಿಸೋಣ'

ಸಾಹುಕಾರರು ನಿರ್ಲಜ್ಜೆಯಿಂದ ತಮ್ಮನ್ನು ತಾವೇ ಮೋಸಪಡಿಸಿಕೊಳ್ಳುತ್ತಿದ್ದರು.

ತಮ್ಮ ಕೋಪೋಶಮನಕ್ಕೆ ಲೋಕಾಭಿರಾಮ ಯಾವದಾದರೂ - ಸರಿಯಾದ ವ್ಯವಸ್ಥೆ ಮಾಡಿಕೊಂಡೇ ಬಂದಿರುತ್ತಾನೆಂಬುದು ಸಾಹುಕಾರರಿಗೆ ಗೊತ್ತು.

ಅದನ್ನು ತಿಳಿಯುವ ಚಪಲ !

ತಿಳಿದ ಮೇಲೆ... ........!

ಸಾಹುಕಾರರು ಬಾಯಿ ಬಿಡದಿದ್ದುದನ್ನು ಕಂಡು ಲೋಕಾಭಿರಾಮನೇ,

"ನನ್ನ ಮೇಲೆ ಇಷ್ಟು ಕೋಪ ಮಾಡಿಕೊಂಡರೆ ಹೇಗೆ ಸ್ವಾಮಿ?"

"ನಾನಾಗುವ ಹೊತ್ತಿಗೆ ನಿನ್ನನ್ನು ಇಷ್ಟಾದರೂ ಮಾತನಾಡಿಸುತ್ತಿದ್ದೇನೆ- ಇನ್ನೊಬ್ಬರಾಗಿದ್ದರೆ...."

"ಎಕ್ಕಡದಲ್ಲಿ ಹೊಡೆಯುತ್ತಿದ್ದರು. ನೀವು ಹೊಡೆಯಿರಿ. ಎಷ್ಟಾದರೂ ನೀವು ನನ್ನ ಧಣಿ-ದೊರೆ – ತಂದೆ….."

"ನಿನ್ನ ಹರಿಕಥೆ ಸಾಕು ಕಣೋ ಲೋಕಾಭಿ - ಬಂದದ್ದೇಕೆ ಹೇಳು."

"ನಾಳೆ ಮದರಾಸಿಗೆ ಹೊರಡುತ್ತೀರಾ ?"

"ಏಕೆ ?"

"ಏಕೆ, ಏನು ಎಂದು ಕೇಳಬೇಡಿ. ಹೊರಡುತ್ತೀರಾ ಹೇಳಿ."

"ಹೊರಡಲೇಬೇಕಾದರೆ ಹೊರಡಬಹುದು."

"ಅಲ್ಲೊಂದು ಪರಮಾಯಿಷಿ ಮಾಲು ರೆಡಿ ಮಾಡಿ ನಿಮಗೆ ತಿಳಿಸುವುದಕ್ಕೆ ನಾನು ಮದರಾಸಿನಿಂದ ಓಡಿಬಂದೆ. ಬೆಳಿಗ್ಗೆ ರೈಲು ಇಳಿದವನು ಮನೆಗೆ ಕೂಡ ಹೋಗಲಿಲ್ಲ ಇಲ್ಲಿ ಬಂದರೆ ನೀವು ನನಗೊಂದು ಕಪ್ ಕೂಡ ಕೊಡಲೊಲ್ಲರೀ"

"ಕಾಫಿಯೇಕೆ - ಗುಂಡೇ ಕೊಡ್ತೀನಿ ಸುಮ್ಮನಿರು..."

ಎನ್ನಲು 'ಹಕ್ಕಿ ಬಲೆಗೆ ಬಿತ್ತು' ಎಂದು ಲೋಕಾಭಿರಾಮ ಧೈರ್ಯಗೊಂಡ.

"ಯಾರೋ ಅವಳು ?"

"ಬೆಂಗಳೂರಿನವಳು - ಕಲಾಕ್ಷೇತ್ರದಲ್ಲಿ ನೃತ್ಯಾಭ್ಯಾಸ ಮಾಡಲು ಮದರಾಸಿನಲ್ಲಿದ್ದಾಳೆ. "

"ನಿನಗೆ ಹೇಗೆ ಸಿಕ್ಕಿದಳು ?"

"ಗ್ರಾಮಫೋನ್ ಕಂಪೆನಿಯಲ್ಲಿ "

“ಕುದುರಿಸಿರುವೆಯಾ - ಮದರಾಸಿನವರೆಗೆ ನನ್ನನ್ನು ಎಳೆದುಕೊಂಡು ಹೋಗಿ ’ತಾರಮ್ಮಯ್ಯ’ ಆಡುವೆಯೋ ?”

“ನನ್ನ ಮೇಲೆ ನಿಮಗೆ ನಂಬಿಕೆಯಿಲ್ಲ - ಮಾತಾಡಿ ಏನು ಪ್ರಯೋಜನ ?”

“ನಂಬಿಕೆ ನೀನು ಉಳಿಸಿಕೊಂಡಿದ್ದೀಯಾ?”

“ತಪ್ಪಾಯಿತು ಸ್ವಾಮಿ, ಮಣ್ಣು ತಿನ್ನುವ ಕೆಲಸ ಮಾಡಿದೆ. ಕ್ಷಮಿಸಿ ಬಿಡಿ. ಎಂದಿದ್ದರೂ ನಾನು ಗುಲಾಮ - ನೀವು ಧಣಿಗಳು.”

“ಮಾಲು ಹೇಗಿದೆಯೋ - ಫೋಟೋ ತಂದಿದ್ದೀಯಾ?”

“ಅಲ್ಲೆಲ್ಲಾ ಏರ್ಪಾಟು ಮಾಡಿಕೊಂಡು ಓಡಿಬಂದೆ ಎಂದು ಹೇಳ್ತಾ ಇದ್ದೀನಿ - ಫೋಟೋ ತರುವಷ್ಟು ನನಗೆ ಪುರಸತ್ತು ಇತ್ತೇ ?”

“ಮಾಲ್ ಹೇಗಿದೆ ?”

“ಭೂಲೋಕದ ರಂಭೆ - ನೀವು ಕೇಳಬೇಕಾಗಿಯೇ ಇಲ್ಲ- ಕೈ ತೊಳೆದುಕೊಂಡು ಮುಟ್ಟಬೇಕು.”

“ಎಲ್ಲರಿಗೂ ಹೀಗೇ ನೀನು ಹೇಳುವುದು ?”

“ಇದೊಂದು ಬಾರಿ - ನನ್ನ ಮಾತು ಕೇಳಿ. ನಿಮಗೆ ತೃಪ್ತಿಯಾಗಲಿಲ್ಲವೆಂದರೆ ಮೆಟ್ಟು ತಗೊಂಡು ನನ್ನ ಹೊಡೆದು ಆಚೆಗಟ್ಟುಬಿಡಿ.”

“ಅದೂ ಆಗಲಯ್ಯ - ಈ ಸಲವೂ ನೋಡ್ತೀನಿ.”

“ಬೆಳಿಗ್ಗೆ ಫಸ್ಟ್ ಬಸ್ಸಿಗೆ ಹೊರಟುಬಿಡೋಣ.”

“ಅಷ್ಟು ಬೇಗ ಬೆಂಗಳೂರಿಗೆ ಹೋಗಿ ಏನು ಮಾಡುವುದು ?”

“ನಾನು ಮದರಾಸಿಗೆ ವೈರ್ ಮಾಡಿ ಹೋಟಲ್ ರೂಮ್ ರಿಸರ್ವ್ ಮಾಡಿಸಬೇಕು - ಸಂಜೆಯವರೆಗೂ ಪುಟ್ಟ ಮನೆಯಲ್ಲಿದ್ದು ನೇರವಾಗಿ ರೈಲಿಗೆ ಹೋಗೋಣ.”

“ಹಾಗೇ ಆಗಲಿ.”

ಲೋಕಾಭಿರಾಮ, ಕುತ್ತಿಗೆ ಉಜ್ಜಿಕೊಳ್ಳುತ್ತಾ,

“ಸ್ವಾಮೀ……..” ಎಂದ.

“ಏನು?”

“ಮನೆಯಲ್ಲಿ ಒಂದು ಕಾಳು ಅಕ್ಕಿಯಿಲ್ಲ. ಮದರಾಸಿನಲ್ಲಿ ನಾನು ಹೋದ ಕೆಲಸವಾಗಲಿಲ್ಲ.”

“ಮದರಾಸಿಗೆ ಏಕೆ ಹೋಗಿದ್ದೆ.”

“ಗ್ರಾಮಫೋನ್ ಕಂಪೆನಿಯವರ ಹತ್ತಿರ ದುಡ್ಡು ವಸೂಲ್ಮಾಡುವುದಕ್ಕೆ.”

“ಅವರು ಕೊಡಲಿಲ್ಲವೇ ?”

“ಇದೇನೋ ವರ್ಷದ ಕೊನೆಯಂತೆ - ಲೆಕ್ಕ ನೋಡುತ್ತಿದ್ದಾರಂತೆ - ಅವರ ಪಿಂಡ - ಮುಂದಿನ ತಿಂಗಳು ಕಳಿಸಿಕೊಡುತ್ತೇವೆ ಎಂದರು.”

“ಇನ್ನೂ ಕಾಲಿಡೋಕಿಲ್ಲ, ಸುಲಿಗೇನೇ ಷುರು ಮಾಡ್ತಿ”

“ನೀವು ಬೇಜಾರು ಮಾಡಿಕೊಳ್ಳುವ ಹಾಗಿದ್ದರೆ ನನಗೆ ಏನೂ ಬೇಡಿ ಸ್ವಾಮಿ – ಸ್ರೀರಾಮ ಕಾಪಾಡ್ತಾನೆ.”

“ಬೆಳಿಗ್ಗೆ ಐವತ್ತು ಸೇರು ಅಕ್ಕಿ ಕೊಡಸ್ತೀನಿ ಸುಮ್ಮನಿರು – ಮಿಕ್ಕದ್ದು ಬೆಂಗಳೂರಿನಲ್ಲಿ ನೋಡಿಕೊಳ್ಳೋಣ”

ಎಂದು ಸಾಹುಕಾರರು ಅವನನ್ನು ಸಮಾಧಾನಪಡಿಸಿದರು.

೧೬

ಮದರಾಸ್ ಮೆಯಿಲ್ ಗಾಡಿ ಬೆಳಿಗ್ಗೆ ಬೇಸಿನ್ ಬ್ರಿಡ್ಜ್ ಸ್ಟೇಷನ್ ಮುಟ್ಟಲು, ಲೋಕಾಭಿರಾಮ ಕೆಳಗಿಳಿದು ಹೋಗಿ ಎರಡು ಕಪ್ ಕಾಫಿ ತಂದು ಸಾಹುಕಾರ ನಂಜಯ್ಯನವರನ್ನು ಎಬ್ಬಿಸಿದ,

ಸಾಹುಕಾರರು ಕಾಫಿ ಕುಡಿಯುತ್ತ,

"ಇನ್ನೂ ಮದರಾಸ್ ಬರಲಿಲ್ಲವೇ ಲೋಕಾಭಿ"

ಎಂದು ಕೇಳಿದರು.

"ಮುಂದಿನ ಸ್ಟೇಷನ್ನೇ ಮದರಾಸು ಸ್ವಾಮಿ."

"ನಾವು ಹೋಗುವ ಹೊತ್ತಿಗೆ ಮಾಲು ಹೋಟಲಿಗೆ ಬಂದಿರುತ್ತೇನೋ ?"

"ಸ್ವಲ್ಪ ತಡೆದುಕೊಳ್ಳಿ ಸ್ವಾಮಿ - ಏಕೆ ಅವಸರಪಡುತ್ತೀರಿ ?"

"ಈ ಸಲ ನೀನೇನಾದರೂ ನನಗೆ ೪೨೦ ಮಾಡಿದರೆ ..."

"ಅಯ್ಯೋ ನಾರಾಯಣಾ - ನಿಮ್ಮನ್ನು ಒಪ್ಪಿಸುವುದು ಬಹಳ ಕಷ್ಟ ಸ್ವಾಮಿ......."

ಆರು ಗಂಟೆಯ ಒಳಗೇ ರೈಲು ಮದರಾಸ್ ಸೆಂಟ್ರಲ್ ಸ್ಟೇಷನ್ ತಲುಪಿತು.

ನಂಜಯ್ಯನವರು, ಲೋಕಾಭಿರಾಮ ಟ್ಯಾಕ್ಸಿ ಮಾಡಿಕೊಂಡು 'ರಾಯಲ್ ಲಾಡ್ಜ್'ಗೆ ಬಂದರು.

ಲೋಕಾಭಿರಾಮ ಕೆಳಗಿಳಿದು ಆಫೀಸಿಗೆ ಹೋದ.

ಸದಾಶಿವಂ ಇನ್ನೂ ಬಂದಿರಲಿಲ್ಲ,

ಕೌಂಟರ್‌ನಲ್ಲಿದ್ದ ಕ್ಲರ್ಕಿಗೆ ಲೋಕಾಭಿರಾಮ,

"ರೂಮ್ ರಿಸರ್ವೇಷನ್‌ಗೆ ನಾನು ವೈರ್ ಮಾಡಿದ್ದೆ."

"ನಿಮ್ಮ ಹೆಸರು ?"

"ಲೋಕಾಭಿರಾಮ್."

ರಿಜಿಸ್ಟರ್ ತೆಗೆದು ನೋಡಿದ ಕ್ಲರ್ಕ್,

"ರೂಮ್ ರಿಸರ್ವ್ ಆಗಿದೆ ಸಾರ್"

ಎಂದು ಬೆಲ್ ಮಾಡಲು, ಒಬ್ಬ ಬಾಯ್ ಬಂದ,

"ಇವರಿಗೆ ೧೩-೧೪ ರೂಮು ಕೊಡು."

"ನಾನು ರಿಸರ್ವೇಷನ್ ಕೇಳಿದ್ದುದು ೧-೨ ರೂಮುಗಳಿಗೆ."

"ಅವು ಬುಕ್ಕಾಗಿವೆ ಸಾರ್."

"ಸದಾಶಿವಂ ಎಲ್ಲಿ ?"

"ಹತ್ತು ಗಂಟೆಗೆ ಬರುತ್ತಾರೆ."

ಲೋಕಾಭಿರಾಮ, ಸಾಹುಕಾರರು ರೂಮ್‌ಬಾಯ್ ಜತೆ ಹೊರಟರು.

ಸಾಹುಕಾರರ ಸಾಮಾನುಗಳನ್ನು ೧೪ ನೆಯ ನಂಬರು ರೂಮಿನಲ್ಲಿಡಿಸಿದ ಲೋಕಾಭಿರಾಮ, ೧೩ ನೆಯ ನಂಬರ್ ರೂಮಿನಲ್ಲಿ ತನ್ನ ಸಾಮಾನುಗಳನ್ನಿಡಿಸಿ ರೂಮ್ ಬಾಯ್‌ಗೆ,

"ಮುಕುಂದ ಇದ್ದರೆ ಕಳಿಸು" ಎಂದ.

ಹತ್ತು ನಿಮಿಷಗಳೊಳಗಾಗಿ ಮುಕುಂದ ಬಂದು,

"ನಮಸ್ಕಾರ ಸ್ವಾಮಿ" ಎಂದ.

"ಏನು ಮುಕುಂದ - ಹೀಗೆ ಮಾಡಿಬಿಟ್ಟೆ, ನಾನು ೧-೨ ರೂಮ್ ಕೇಳಿದರೆ ಈ ರೂಮ್ ಕೊಡಿಸಿದ್ದೀ?"

"ಚೆಟ್ಟಿನಾಡಿನವರು ಒಂದು ತಿಂಗಳು ರಿಸರ್ವ್ ಮಾಡಿಕೊಂಡಿದ್ದಾರೆ ಸಾರ್."

"ಸದಾಶಿವಂ ಎಲ್ಲಿ ?"

"ಇವತ್ತು ಅವರ ಮನೆಯಲ್ಲಿ ಏನೋ ಕಾರ್ಯವಂತೆ. ಸ್ವಲ್ಪ ಲೇಟಾಗಿ ಬರ್ತೀನಂದ್ರು."

"ನಮ್ಮ ಸಾಹುಕಾರರನ್ನು ಕರೆದುಕೊಂಡು ಬಂದಿದ್ದೀನಲ್ಲಯ್ಯಾ."

"ಅದೇ ಸಾಹುಕಾರ್ರೇ ಸಾರ್."

"ಅವರಲ್ಲ - ಇವರು ಬೇರೆ. ನಾನೂ ಸ್ವಲ್ಪ ಹೊರಗೆ ಹೋಗಿ ಬರಬೇಕಾಗಿದೆ. ನಮ್ಮ ಸಾಹುಕಾರರನ್ನು ನೋಡಿಕೋ."

"ಆಗಲಿ."

"ಗುಂಡಿಗೇನು ಮಾಡ್ತೀ ?"

"ಮ್ಯಾನೇಜರು ಬರಬೇಕು ಸಾರ್."

"ಮ್ಯಾನೇಜರ್ ಬಂದ ಮೇಲೆ - ನಾನಿಲ್ಲದಿದ್ದರೂ ಚಿಂತೆಯಿಲ್ಲ - ಸಾಹುಕಾರರಿಗೆ ಗುಂಡು ತೆಗೆದುಕೊಂಡು ಹೋಗಿ ಕೊಡು."

"ಹಾಗೇ ಆಗಲಿ"

ಎಂದು ಮುಕುಂದ ಒಪ್ಪಿಕೊಂಡ.

ಲೋಕಾಭಿರಾಮ, ಸಾಹುಕಾರರು ಇಬ್ಬರೂ ಸ್ನಾನ, ಉಪಾಹಾರ ಮುಗಿಸಿದರು.

ಲೋಕಾಭಿರಾಮ ಶುಭ್ರವಾದ ವಸ್ತ್ರಗಳನ್ನು ಧರಿಸಿ,

"ನಾನೇ ಹೋಗಿ ಕರೆದುಕೊಂಡು ಬರುತ್ತೇನೆ."

"ಹೋಗು - ಬೇಗ ಬಾ - ಟ್ಯಾಕ್ಸಿ ಮಾಡಿಕೊಂಡು ಹೋಗು - ಅವಳಿರುವುದೆಲ್ಲಿ ?"

"ಅಡೆಯಾರಿನಲ್ಲಿ - ಮುಕುಂದರಿಗೆ ನಾನು ಎಲ್ಲಾ ಹೇಳಿದ್ದೇನೆ. ಇನ್ನು ಸ್ವಲ್ಪ ಹೊತ್ತಿಗೆ ಅವನು ಗುಂಡು ತಂದುಕೊಡುತ್ತಾನೆ - ನೀವು ಷುರು ಮಾಡಿರಿ."

"ನನ್ನ ಪಾಡು ಏನೋ ಅಗುತ್ತೆ, ನೀನು ಹೋಗಿ ಬಾ"

ಎಂದು ಹೇಳಿದರು.

ಕಲಾಕ್ಷೇತ್ರದ ಹೊರಗಡೆ ಟ್ಯಾಕ್ಸಿ ನಿಲ್ಲಿಸಿ, ಆಫೀಸಿಗೆ ಲೋಕಾಭಿರಾಮ ಹೋಗಲು, ದಾಮೋದರ ಅವನನ್ನು ಕಂಡು,

"ಯಾರು ನೀವು ?" ಎಂದು ಕೇಳಿದರು.

"ಮೋಹಿನಿದೇವಿಯವರನ್ನು ಇಲ್ಲಿ ಸೇರಿಸುವುದಕ್ಕೆ ನಾನು ಬಂದಿದ್ದೆನಲ್ಲಾ ಮರೆತುಹೋಯಿತೇ ?"

"ಕುಳಿತುಕೊಳ್ಳಿ ಈಗ ಜ್ಞಾಪಕ ಬಂತು."

ಲೋಕಾಭಿರಾಮ ಕುಳಿತುಕೊಳ್ಳಲು ದಾಮೋದರ,

"ಏನು ಬಂದಿದ್ದಿರಿ ?" ಎಂದು ಕೇಳಿದರು.

"ಮೋಹಿನಿದೇವಿಯವರ ಅಂಕಲ್‌ಗೆ ಸಖತ್ ಕಾಹಿಲೆಯಾಗಿದೆ - ಮೋಹಿನಿದೇವಿಯವರನ್ನು ಕಾಣಬೇಕಾಗಿತ್ತು."

ದಾಮೋದರನ್ ಆಫೀಸ್ ಬಾಯ್ ಕರಿದು,

"ಮೋಹಿನಿದೇವಿಯವರನ್ನು ಕರೆದುಕೂಂಡು ಬಾ" ಎಂದು ಹೇಳಿ,

"ಸಾಹುಕಾರರಿಗೆ ಏನಾಗಿದೆ ?"

"ನರದೌರ್ಬಲ್ಯ ಎಂದು ಡಾಕ್ಟರು ಹೇಳಿದರು. ಹಾಸಿಗೆ ಹತ್ತಿ ಮಲಗಿ ಬಿಟ್ಟಿದ್ದಾರೆ."

"ಅಯ್ಯೋ ಪಾಪ ! ಮೊನ್ನೆ ತಾನೆ ಮೋಹಿನಿದೇವಿ ಅವರಿಗೆ ಟ್ರಂಕ್ ಕಾಲ್ ಮಾಡಿದಳಲ್ಲಾ!"

"ಹೌದು. ಆಗ ಸಾಹುಕಾರರಿಗೆ ಕಾಹಿಲೆ ಕಾಣಿಸಿಕೊಂಡಿತ್ತು. ಅವರದನ್ನು ನಿರ್ಲಕ್ಷ್ಯ ಮಾಡಿಬಿಟ್ಟರು."

"ಮೋಹಿನಿ ಬೆಂಗಳೂರಿಗೆ ಪ್ರಯಾಣ ಮಾಡಬೇಕಾಗುತ್ತದೆ."

"ಸದ್ಯಕ್ಕೆ ಬೇಕಿಲ್ಲ. ಅವರ ಮನೆತನದ ಕೆಲವು ವಿಷಯಗಳನ್ನು ತಿಳಿಸುವುದಕ್ಕೆ ನನ್ನನ್ನು ಕಳಿಸಿದ್ದಾರೆ. ನಾನು ಊರಿಗೆ ಹೋದ ಮೇಲೆ ಸಾಹುಕಾರರ ಸ್ಥಿತಿ ನೋಡಿ ವೈರ್ ಮಾಡುತ್ತೇನೆ. ಈಗ ನಾನು ಮೋಹಿನಿದೇವಿಯನ್ನು ಹೊರಗೆ ಕರೆದುಕೊಂಡು ಹೋಗಬಹುದೇ?"

"ಅಗತ್ಯವಾಗಿ ಕರೆದುಕೊಂಡು ಹೋಗಿ" ಎಂದರು.

ಮೋಹಿನಿ ಬಂದವಳು ಲೋಕಾಭಿರಾಮನನ್ನು ನೋಡಿ ಆಶ್ಚರ್ಯದಿಂದ,

"ಏನು ಲೋಕಾಭಿರಾಮ್ ಅಂಕಲ್ ಬಂದಿದ್ದಾರೆಯೇ?" ಎಂದಳು.

"ಇಲ್ಲಮ್ಮ - ನನ್ನನ್ನು ಕಳಿಸಿದ್ದಾರೆ – ಬನ್ನಿ"

ಎಂದವಳನ್ನು ಜತೆಯಲ್ಲಿ ಕಾರಿನ ಬಳಿಗೆ ಕರೆದೊಯ್ದು , ಬಾಗಿಲು ತೆಗೆದು ಕೂಡಿಸಿ, ಮುಂದಿನ ಸೀಟಿನಲ್ಲಿ ತಾನು ಕುಳಿತುಕೊಂಡ.

"ಏನು ಸಮಾಚಾರ ಲೋಕಾಭಿರಾಮ್."

"ನೀವು ನನ್ನ ಜತೆ ಬರಬೇಕು."

"ಎಲ್ಲಿಗೆ ?"

"ರಾಯಲ್ ಲಾಡ್ಜ್‌ಗೆ."

"ಏಕೆ ?"

"ಬನ್ನಿ - ನಿಮಗೇ ತಿಳಿಯುತ್ತದೆ."

"ಹಾಗೆ ನಾನು ಬರುವುದಿಲ್ಲ. ಸಮಾಚಾರ ಏನು ಹೇಳಿ."

ಹೇಗೆ ಆರಂಭಿಸುವುದೆಂದು ವಿಚಾರ ಮಾಡಿದ ಲೋಕಾಭಿರಾಮ,

"ಪಾಠಗಳು ಕ್ರಮವಾಗಿ ನಡೆಯುತ್ತಿವೆಯೇ ?"

"ನಡೆಯುತ್ತಿವೆ. ಸಾಹುಕಾರರು ಏಕೆ ಬರಲಿಲ್ಲ ?"

"ಕ್ಯಾಬಿನೆಟ್ ಕ್ರೈಸಿಸ್ (cabinet crisis) - ಸಾಹುಕಾರರಿಗೆ ಉಸಿರಾಡುವುದಕ್ಕೂ ಅವಕಾಶವಿಲ್ಲದಂತಾಗಿದೆ, ನಿಮ್ಮ ಅಂಕಲ್‌ಗೆ ಸಖತ್ ಕಾಹಿಲೆ - ನರದೌರ್ಬಲ್ಯದಿಂದ ಹಾಸಿಗೆ ಹತ್ತಿ ಮಲಗಿದ್ದಾರೆ ಎಂದು ದಾಮೋದರನ್‌ಗೆ ಹೇಳಿದ್ದೇನೆ. ಅವರು ನಿಮ್ಮನ್ನು ಕೇಳಿದರೆ ನೀವೂ ಹಾಗೇ ಹೇಳಿ."

"ನೀವು ಮದರಾಸಿಗೆ ಬಂದ ಉದ್ದೇಶ......."

"ಸ್ವಲ್ಪ ಕೆಲಸವಿತ್ತು."

"ಇನ್ನು ನಾನು ಹೊರಡುತ್ತೇನೆ. ಕ್ಲಾಸ್ ಮುಗಿಯುವ ಕಾಲವಾಯಿತು."

"ಕೂಡಿ - ಹೋಗಬೇಡಿ. ನಾನು ನಿಮ್ಮ ಜತೆ ಮಾತನಾಡಬೇಕು."

"ಬೇಗ ಹೇಳಿ."

"ನಿಮಗೂ ಸಾಹುಕಾರ ಹೊನ್ನಪ್ಪನವರಿಗೂ ಸ್ನೇಹವಾಗುವುದಕ್ಕೆ ನನ್ನ ಪ್ರಯತ್ನವೂ ಕಾರಣವೆಂಬುದನ್ನು ಒಪ್ಪಿಕೊಳ್ಳುತ್ತೀರಲ್ಲವೇ ?"

"ಒಪ್ಪಿಕೊಳ್ಳುತ್ತೇನೆ."

"ನನ್ನಿಂದ ನಿಮಗೆ ಉಪಕಾರವಾಗಿದೆ."

"ನಾನು ಇಲ್ಲ ಎಂದೆನೆ ?"

"ಉಪಕಾರಕ್ಕೆ ನೀವು ನನಗೆ ಪ್ರತ್ಯುಪಕಾರ ಮಾಡಬೇಕು."

"ಏನಾಗಬೇಕು ಹೇಳಿ - ದುಡ್ಡು ಬೇಕೇ?"

"ದುಡ್ಡು ಬೇಕಾಗಿಲ್ಲ - ನೀವು ನನ್ನ ಜತೆ ಬರಬೇಕು."

"ಎಲ್ಲಿಗೆ ?"

"ರಾಯಲ್ ಲಾಡ್ಜ್‌ಗೆ."

"ಏಕೆ ?"

"ನನ್ನ ಸ್ನೇಹಿತರೊಬ್ಬರ ಪರಿಚಯ ಮಾಡಿಕೊಳ್ಳುವುದಕ್ಕೆ – ಕೇಳಿ, ಈತ ಲಕ್ಷಾಧಿಕಾರಿ - ತುಂಬ ಧಾರಾಳಿ, ನಾನು ಬದುಕಿ ಬಾಳುತ್ತಿರುವುದೇ ಈ ಪುಣ್ಯಾತ್ಮನ ದಯೆಯಿಂದ. ಇವರು ನನ್ನ ತಂದೆಯ ಸಮಾನ !"

ಮೋಹಿನಿ ನಕ್ಕು

"ಹೊನ್ನಪ್ಪನವರ ವಿಷಯವೂ ಹೀಗೇ ಹೇಳಿದರಲ್ಲಾ ಲೋಕಾಭಿರಾಮ್. ಅವರನ್ನೂ ತಂದೆಯೆಂದು ಕರೆದಿರಿ ?"

"ನನಗೆ ನಾಲ್ಕಾರು ತಂದೆಗಳಿದ್ದಾರೆ."

ಮೋಹಿನಿ ಗಹಗಹಿಸಿ ನಕ್ಕಳು.

"ನೀವು ಬರದಿದ್ದರೆ ನಾನು ಕೆಟ್ಟುಹೋಗುತ್ತೇನೆ. ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ, ಬನ್ನಿ."

"ಸಾಹುಕಾರರಿಗೆ ನೀವು ಈ ರೀತಿ ಮೋಸ ಮಾಡಬಾರದು ಲೋಕಾಭಿರಾಮ್. ನಾನು ಗಿಡದಿಂದ ಗಿಡಕ್ಕೆ ಹಾರುವ ಬಣ್ಣದ ಚಿಟ್ಟೆಯಲ್ಲ. ಒಂದು ಬಾರಿ ಜಾರಿದ್ದೇನೆ - ಆದರೆ ಅದನ್ನೇ ಸರಿಪಡಿಸಿಕೊಳ್ಳಲು ಯತ್ನಿಸುತ್ತಿದ್ದೇನೆ. ಹೊನ್ನಪ್ಪನವರನ್ನಲ್ಲದೆ ನಾನು ಬೇರೆ ಯಾರನ್ನೂ ಕಣ್ಣೆತ್ತಿ ನೋಡುವುದಿಲ್ಲ."

ಮುಖಭಂಗಿತನಾದ ಲೋಕಾಭಿರಾಮ ಕ್ರೋಧತಪ್ತನಾದ.

'ಸಾಹುಕಾರ್ ನಂಜಯ್ಯನವರಿಗೆ ಹೇಗೆ ಮುಖ ತೋರಿಸುವುದು.

'ಶತಾಯ ಗತಾಯ ಇವಳನ್ನು ಒಪ್ಪಿಸಲೇ ಬೇಕು - ಇಲ್ಲದಿದ್ದರೆ ನನ್ನ ಬಾಯಿಗೆ ಮಣ್ಣು ಬೀಳುತ್ತದೆ'

ಎಂದು ಯೋಚಿಸುತ್ತ,

"ಏನಂದಿರಿ - ಹೊನ್ನಪ್ಪನವರನ್ನಲ್ಲದೆ ಬೇರೆ ಯಾರನ್ನೂ ಕಣ್ಣೆತ್ತಿ ನೋಡುವುದಿಲ್ಲ ಅಲ್ಲವೇ?"

"ಹೂ !"

"ನನ್ನ ಮಾತು ಕೇಳದಿದ್ದರೆ ನೀವು ಹೊನ್ನಪ್ಪನವರನ್ನೂ ನೋಡುವುದಕ್ಕಾಗುವುದಿಲ್ಲ."

ಲೋಕಾಭಿರಾಮನ ಬೆದರಿಕೆ ಕೇಳಿ ಅಧೀರಳಾದ ಮೋಹಿನಿ,

"ಏಕೆ - ಹಾಗೆನ್ನುವಿರಿ ?"

"ನಿಮ್ಮಂಥವರು ಸಾವಿರ ಜನ 'ದಿಲ್‌ರುಬಾ' ಬಂಗಲೆ ಹೊಕ್ಕು ಹೋದರು. ಸಾಹುಕಾರರು ಅವರನ್ನು ಸ್ಮರಿಸಿಕೊಳ್ಳುವುದೂ ಇಲ್ಲ. ಏಕೆ ಬಲ್ಲಿರಾ ?"

"ಏಕೆ ?"

"ಲೋಕಾಭಿ ಇರುವುದರಿಂದ."

"ಬಹಳ ಪವಿತ್ರಕಾರ್ಯ ಮಾಡುತ್ತಿರುವಿರಿ ಲೋಕಾಭಿರಾಮ್."

"ಮಾಡದೆ ಹೊಟ್ಟೆಗೆ ಮಣ್ಣು ಹಾಕಿಕೊಳ್ಳಲೇ"

"ಮಣ್ಣು ಹಾಕಿಕೊಂಡರೂ... ...."

"ಪರವಾಗಿಲ್ಲ ಅಲ್ಲವೇ?"

"……………..."

"ಒಂದು ದಿನ ಉಪವಾಸವಿದ್ದು ನೋಡಿ . ನಿಮಗೆ ತಿಳಿಯುತ್ತದೆ."

"ನಾನು ರಾಯಲ್ ಲಾಡ್ಜ್‌ಗೆ ಬರದಿದ್ದರೆ, ನೀವು ಹೊನ್ನಪ್ಪನವರಿಗೆ ನನ್ನ ಮೇಲೆ ಚಾಡಿ ಹೇಳುತ್ತೀರಿ !"

"ಚಾಡಿ ಹೇಳುವುದಿಲ್ಲ - ನಿಜಸ್ಥಿತಿ ತಿಳಿಸುತ್ತೇನೆ."

"ಏನು ನಿಜಸ್ಥಿತಿ ?"

"ನಾನೇ ನಿಮ್ಮನ್ನು ಹಲವರ ಬಳಿಗೆ ಕರೆದುಕೊಂಡು ಹೋಗಿದ್ದೆ ಎಂದು ಹೇಳುತ್ತೇನೆ."

"ಇದು ಶುದ್ಧ ಸುಳ್ಳು."

"ಇದು ಕಲಿಯುಗ - ಯಾವದನ್ನು ನೀವು ಸುಳ್ಳು ಎನ್ನುವಿರೋ ಅದನ್ನೇ ನಾನು ನಿಜವೆನ್ನುವುದು?"

"ಹಾಗೆ ನೀವು ಹೇಳಿದರೆ ಸಾಹುಕಾರರು ನಿಮ್ಮನ್ನು ಹತ್ತಿರ ಸೇರಿಸುವರೇ ?"

"ಇಲ್ಲ."

"ನಿಮಗಾದ ಲಾಭವೇನು ?"

"ನಿಮ್ಮ ಉಚ್ಚಾಟನೆ!"

"ಒಬ್ಬ ಅಸಹಾಯಕ ಹೆಂಗಸಿನ ಮೇಲೆ ನೀವು ಇಂಥ ದೌರ್ಜನ್ಯ ತೋರಿಸಬಹುದೇ ?"

"ಹೆಂಗಸು ಅಸಹಾಯಕಳಾಗಿದ್ದಾಳೆಂದೇ ನಾನು ಅವಳಿಗೆ ಸಹಾಯ ಮಾಡಲು ಬಂದಿರುವುದು."

"ನಿಮ್ಮ ಸಹಾಯ ನನಗೆ ಬೇಕಿಲ್ಲ"

ಎಂದು ಮೋಹಿನಿ ಕಾರಿನಿಂದಿಳಿದು ಹಾಸ್ಟಲ್ ಕಡೆ ವೇಗವಾಗಿ ನಡೆಯುತ್ತ ಹೊರಟು ಬಿಟ್ಟಳು.

ಲೋಕಾಭಿರಾಮ ಮಂತ್ರಮುಗ್ಧನಂತೆ ಕುಳಿತುಬಿಟ್ಟ.

ಮೋಹಿನಿಯ ದಿಟ್ಟತನ, ಮೊಂಡು ಧೈರ್ಯ ಅವನನ್ನು ಹಿಡಿದಲುಗಿಸಿತ್ತು.

ಸ್ವಲ್ಪ ಕಾಲಾನಂತರ ಚೇತರಿಸಿಕೊಂಡ ಲೋಕಾಭಿರಾಮ,

'ಇವಳ ಅಹಂಕಾರ - ಪೊಗರು - ಧೈರ್ಯ ಮುರಿಯದಿದ್ದರೆ ನಾನು ಲೋಕಾಭಿರಾಮನೇ!'

ಎಂದುಕೊಂಡು ಡ್ರೈವರನ್ನು ಕೂಗಿದ.

ರಾಯಲ್ ಲಾಡ್ಜ್ ಬಳಿ ಟ್ಯಾಕ್ಸಿಯನ್ನು ಕಳಿಸಿದ ಲೋಕಾಭಿರಾಮನಿಗೆ ಒಳಗೆ ಹೋಗಲು ಧೈರ್ಯವಿಲ್ಲ.

'ಸಾಹುಕಾರರಿಗೆ ಏನು ಹೇಳುವುದು ?

'ಅವರನ್ನೀಗ ನಿರಾಶೆಗೊಳಿಸಿದರೆ ನನ್ನ ಕಥೆ ಮುಗಿದೇ ಹೋಗುತ್ತದೆ.

'ಬೇರೆ ಯಾರನ್ನಾದರೂ ಪತ್ತೆ ಹಚ್ಚಿ 'ಇವಳೇ ಮೋಹಿನಿ'ಯೆಂದು ಸಾಹುಕಾರರಿಗೆ ಹೇಳಬೇಕು.'

ಎಂದು ನಿರ್ಧರಿಸಿದ ಲೋಕಾಭಿರಾಮ ಬ್ರೋಕರ್ ಕರ್ಪನ ದಾರಿ ನೋಡುತ್ತ ನಿಂತ.

ಅರ್ಧ ಗಂಟೆ ಅವನು ಬಿಸಿಲಿನಲ್ಲಿ ಒಣಗಿದ ಮೇಲೆ ಕರ್ಪನ ದರ್ಶನವಾಯಿತು.

"ಯಾವಾಗ ಬಂದಿರಿ ಸಾಮಿ,"

"ಬೆಳಿಗ್ಗೆ ಬಂದೆ ಕರ್ಪ."

"ಸಾವುಕಾರ್ ಬಂದಿದ್ದಾರೆ."

"ಸಾವಕಾರ್ ಬಂದಿದ್ದಾರೆ - ಆಗ ಬಂದಿದ್ದರಲ್ಲ, ಅವರಲ್ಲ – ಇವರು ಬೇರೆ. ಬಾ - ಕಾಫಿ ಕುಡಿಯೋಣ"

ಎಂದು ಕರ್ಪನನ್ನು ಕರೆದುಕೊಂಡು ಹೋಗಿ, ಒಂದು ಸಣ್ಣ ಹೋಟಲಿನಲ್ಲಿ ಕೂಡಿಸಿಕೊಂಡು,

"ಒಂದು ಒಳ್ಳೆಯ ಮಾಲ್ ಬೇಕು ಕರ್ಪ."

"ಯಾರಿಕೆ - ನಿಮಕಾ ?"

"ನನಗಲ್ಲ - ಸಾಹುಕಾರರಿಗೆ."

"ಕರಕೊಂಡು ಬರ್ಲಾ?"

"ನಾನು ಮೊದಲು ನೋಡಬೇಕು."

“ಟ್ಯಾಕ್ಸಿ ಮಾಡಿ - ಓಗೋಣ.”

“ಡಾನ್ಸರ್ ಅಗಬೇಕು ಕಣೋ”

“ಬನ್ನಿ ಸಾಮಿ - ನಿಮಗೆ ಎಂತೆಂತವ್ರು ಬೇಕು, ನಾನು ಕುಡುವೆ.”

ಕರ್ಪನನ್ನು ಟ್ಯಾಕ್ಸಿಯಲ್ಲಿ ಕರೆದೊಯ್ದು ಲೋಕಾಭಿರಾಮ ನಾಲ್ಕಾರು ಹೆಣ್ಣುಗಳನ್ನು ನೋಡಿ ಅತೃಪ್ತನಾಗಿ ರಾಯಲ್ ಲಾಡ್ಜ್‌ಗೆ ಹಿಂದಿರುಗಿದ

ಒಳಗೆ ಹೋಗಲು ಧೈರ್ಯವಾಗಲಿಲ್ಲ.

ಗಂಟೆ ಹನ್ನೆರಡಾಗಿತ್ತು.

ಬಸಿಲಿನಲ್ಲಿ ಬೇಯುವುದು ಅವನಿಗೆ ದುಸ್ಸಾಧ್ಯವಾಯಿತು.

ಕೈಯಲ್ಲಿ ಎದೆ ಹಿಡಿದುಕೊಂಡು ಅವನು ಸಾಹುಕಾರರ ರೂಮ ಪ್ರವೇಶಿಸಿದ.

ಸಾಹುಕಾರರು ಒಬ್ಬರೇ ಕುಳಿತುಕೊಂಡು 'ಪಾನಕಪೂಜೆ' ಆರಂಭಿಸಿದ್ದರು. ಅದನ್ನು ಕಂಡ ಲೋಕಾಭಿ,

“ಗುಡ್ (Good) - ಬೇಸರವಾಗಲಿಲ್ಲ ತಾನೇ!”

“ಆಗದೆ ಇರುತ್ತದೆಯೇ ? ಎಲ್ಲಯ್ಯಾ ನಿನ್ನ ಮೋಹಿನಿ?”

“ಬರ್ತಾ ಇದ್ದಾಳೆ ಸ್ವಾಮಿ.”

“ಜತೆಯಲ್ಲಿ ಏಕೆ ಕರೆದುಕೊಂಡು ಬರಲಿಲ್ಲ.”

“ಕಲಾಕ್ಷೇತ್ರದಲ್ಲಿ ಯಾರಾರು ಕಂಡಾರು ಎಂದು ಅವಳು ಹೆದರಿದಳು.”

“ಅವಳೊಬ್ಬಳೇ ಹೇಗೆ ಬರುತ್ತಾಳೆ-”

“ಟ್ಯಾಕ್ಸಿ ಬಾಡಿಗೆ ಕೊಟ್ಟು ಬಂದಿದ್ದೇನೆ.”

“ತೊಗೋ - ಸ್ರೀರಾಮನನ್ನು ಹಾಕು” ಎಂದರು.

ಗ್ಲಾಸಿಗೆ ಮದ್ಯ ಸುರುವಿಕೊಳ್ಳುವಾಗ ಲೋಕಾಭಿಯ ಕೈ ಗಡಗಡನೆ ನಡುಗಿತು.

ಹಾಸ್ಟಲ್ಲಿನಲ್ಲಿ ತನ್ನ ರೂಮಿಗೆ ಹೋದ ಮೋಹಿನಿ, ಹಾಸಿಗೆಯ ಮೇಲೆ ಧೊಪ್ಪನೆ ಬಿದ್ದು ಅಳಲಾರಂಭಿಸಿದಳು.

ಲೋಕಾಭಿರಾಮನ ದುಷ್ಟ ವಿಚಾರ, ಅವನ ಬೆದರಿಕೆ ಅವಳನ್ನು ಅಧೀರಳನ್ನಾಗಿ ಮಾಡಿತ್ತು.

'ಲೋಕಾಭಿಯಂಥ ಯಃಕಶ್ಚಿತ ಪ್ರಾಣಿಯಿಂದ ನಾನು ಇಷ್ಟು ಮಾತು ಕೇಳಬೇಕಾಯಿತಲ್ಲ'

ಎಂದು ಮಮ್ಮಲ ಮರುಗಿದಳು.

ಕ್ಲಾಸ್ ಮುಗಿಸಿಕೊಂಡು ರೂಮಿಗೆ ಬಂದ ಕಲಾವತಿ, ಮೋಹಿನಿಯ ಅವಸ್ಥೆ ಕಂಡು, ಗಾಬರಿಗೊಂಡು ಅವಳ ಸಮೀಪಕ್ಕೆ ಬಂದು ಕುಳಿತು,

"ಏಕೆ ಮೋಹಿನಿ - ಏನಾಯಿತು ?" ಎಂದು ಕೇಳಿದಳು.

"ನನ್ನ ಅಂಕಲ್‌ಗೆ ತುಂಬ ಕಾಹಿಲೆಯಂತೆ ಕಲಾ."

"ಕಾಗದ ಬಂತೇ ?"

"ಇಲ್ಲ. ಅವರ ಪ್ರೈವೇಟ್ ಸೆಕ್ರೆಟರಿ ಲೋಕಾಭಿರಾಮ್ ಬಂದಿದ್ದಾರೆ."

"ಅದಕ್ಕಿಷ್ಟು ಗಾಬರಿಗೊಳ್ಳಬೇಕೇ?"

"ನಮ್ಮ ಮನೆ ಉಳಿದಿರುವುದೇ ಅಂಕಲ್‌ನಿಂದ ಕಲಾ – ಅವರಿಗೆ ಹೆಚ್ಚು ಕಡಿಮೆಯಾದರೆ ನಾನು ಬೆಂಗಳೂರಿಗೆ ಹೋಗಬೇಕಾಗುತ್ತದೆ."

"ಗಾಬರಿಯಾಗಬೇಡಿ - ಲೋಕಾಭಿರಾಮರನ್ನು ಸರಿಯಾಗಿ ಕೇಳಿ, ನಿಮ್ಮ ಅಂಕಲ್ ಆರೋಗ್ಯ ಹೇಗಿದೆ ತಿಳದುಕೊಳ್ಳಿ. ಅವಶ್ಯಕವೆನಿಸಿದರೆ ಬೆಂಗಳೂರಿಗೆ ಹೋಗಿ ಬನ್ನಿ"

"ನೀವು ಹೇಳುವುದು ನಿಜ ಕಲಾ - ನಾನು ಲೋಕಾಭಿರಾಮ್ ಅವರನ್ನು ಕಂಡು ಬರುತ್ತೇನೆ."

"ಅವರೆಲ್ಲಿ ಇಳಿದುಕೊಂಡಿದ್ದಾರೆ."

"ಎಗ್ಮೋರ್ ಹೋಟಲಿನಲ್ಲಿ."

"ನಾನು ಜತೆಯಲ್ಲಿ ಬರಲೇ ಮೋಹಿನಿ"

“ಏನೂ ಬೇಡಿ”

ಎಂದು ಮೇಲಕ್ಕೆದ್ದ ಮೋಹಿನಿ, ಮುಖ ತೊಳೆದುಕೊಂಡು, ವಸ್ತ್ರ ಬದಲಿಸಿಕೊಂಡು ಹಾಸ್ಟಲ್ ಬಿಟ್ಟು ಹೊರಟಳು.

ಪಾನಪ್ರಮತ್ತರಾಗಿದ್ದ ಸಾಹುಕಾರ್ ನಿಟ್ಟೂರು ನಂಜಯ್ಯನವರು ಗಳಿಗೆ ಗಳಿಗೆಗೊಮ್ಮೆ,

“ಎಲ್ಲೋ ಆ ನಿನ್ನ ಮೋಹಿನಿ”

ಎಂದು ಕೇಳುತ್ತಿದ್ದರು.

“ಬರ್ತಾಳೆ ಸಾಹುಕಾರರೇ - ಬರ್ತಾಳೆ !”

“ಇನ್ನು ಯಾವಾಗಲೋ ಬರೋದು ಹುಚ್ಚುಸೂಳೇಮಗನೇ!”

“ಅಡೆಯಾರ್ ಇಲ್ಲಿದೆಯೇ ?”

“ಒಂದು ಟ್ಯಾಕ್ಸಿಗತಿಯಿಲ್ಲವೇನೋ? ಈ ಸಲ ನನಗೇನಾದರೂ ೪೨೦ ಮಾಡಿದರೆ, ಇಲ್ಲೇ ಗುಣಿ ತೋಡಿಸಿ ನಿನ್ನ ಹೂಳಿಸಿಬಿಡುತ್ತೇನೆ.”

“ನಮ್ಮ ಜನರಲ್ಲಿ ಸುಡುತ್ತಾರೆ ಸಾವಕಾರರೇ ಹೂಳಲ್ಲ !”

“ಥೂ ಭಂಡನಾಯಿ”

ಯಾರೋ ಬಾಗಿಲು ಬಡಿದರು,

ಲೋಕಾಭಿರಾಮ ’ಯಾರು’ ಎಂದ.

“ನಾನು ಸಾರ್ - ಮುಕುಂದ. ಸ್ವಲ್ಪ ಹೊರಗೆ ಬನ್ನಿ”

ಲೋಕಾಭಿರಾಮ ಹೊರಗೆ ಬರಲು ಮುಕುಂದ,

“ಆ ಅಮ್ಮಾವರು ಬಂದಿದ್ದಾರೆ ಸಾರ್.”

“ಮೋಹಿನಿದೇವಿಯೇ ?”

“ಹೂ”

“ಎಲ್ಲಿದ್ದಾರೆ ?”

“ಅಗೋ - ಆ ಮರದ ಹತ್ತಿರ.”

ಲೋಕಾಭಿರಾಮನೇ ಧಾವಿಸಿ ಹೋಗಿ, ಮೋಹಿನಿಯನ್ನು ರೂಮಿಗೆ ಕರೆತಂದು,

“ಇವರೇ ನಮ್ಮ ಸಾಹುಕಾರರು” ಎಂದ.

ಸಾಹುಕಾರರು ಕೈಯಲ್ಲಿದ್ದ ಗ್ಲಾಸ್ ಮೇಜಿನ ಮೇಲಿಟ್ಟು, ಬಾಯಿಬಿಟ್ಟುಕೊಂಡು ಮೋಹಿನಿಯನ್ನು ನೋಡಲಾರಂಭಿಸಿದರು.

ಲೋಕಾಭಿರಾಮ ಸಾಹುಕಾರರ ಪಕ್ಕಕ್ಕೆ ಒಂದು ಕುರ್ಚಿ ಎಳೆದು,

"ಕುಳಿತುಕೊಳ್ಳಿಯಮ್ಮ" ಎಂದ.

ಕುರ್ಚಿಯ ಮೇಲೆ ಕುಳಿತ ಮೋಹಿನಿ,

"ಅದೇನು ನೀವು ತೆಗೆದುಕೊಳ್ಳುತ್ತಿರುವುದು ?"

"ಸ್ಕಾಚ್ ವಿಸ್ಕಿ."

"ನನಗೂ ಕೊಡಿ."

ಲೋಕಾಭಿರಾಮ ಒಂದು ಗ್ಲಾಸ್ ತೆಗೆದುಕೊಂಡು ಅರ್ಧ ಪೆಗ್ ಬಗ್ಗಿಸಲು ಮೋಹಿನಿ ಅವನ ಕೈಯ್ಯಿಂದ ಶೀಷೆ ತೆಗೆದುಕೊಂಡು ಎರಡು ಪೆಗ್‌ಗಳಷ್ಟು ಬಗ್ಗಿಸಿ,

"ಸ್ವಲ್ಪ ಸೋಡಾ ಹಾಕಿ" ಎಂದಳು.

ಲೋಕಾಭಿರಾಮ ಸೋಡಾ ಬೆರಸಲು, ಮೋಹಿನಿ ಅರ್ಧ ಗ್ಲಾಸನ್ನು ಒಮ್ಮೆಲೇ ಮುಗಿಸಿದಳು

"ಇನ್ನು ನಾನು ಬರುತ್ತೇನೆ"

ಎಂದು ಲೋಕಾಭಿರಾಮ ಮೇಲಕ್ಕೆದ್ದ,

"ಹೋಗಬೇಡಿ - ಕುಳಿತುಕೊಳ್ಳಿ ಲೋಕಾಭಿರಾಮ್."

ಲೋಕಾಭಿರಾಮ ಕುಳಿತುಕೊಳ್ಳಲು ಮೋಹಿನಿ ತನ್ನ ಗ್ಲಾಸ್ ಮುಗಿಸಿ,

"ಇನ್ನಷ್ಟು ವಿಸ್ಕಿ ಹಾಕಿ" ಎಂದಳು.

"ಸಾಕ್ರಮ್ಮಾ-"

"ಸುಮ್ಮನೆ ಹಾಕುತ್ತೀರೋ ಇಲ್ಲವೋ ?"

ಲೋಕಾಭಿ ಒಂದು ಪೆಗ್ಗಿನಷ್ಟು ವಿಸ್ಕಿ ಬಗ್ಗಿಸಿದ.

ಮೋಹಿನಿ ಅದರಿಂದ ಸ್ವಲ್ಪ ಸೇವಿಸಿ,

"ಮೊದಲು ವ್ಯವಹಾರ ಮುಗಿಸಿ" ಎಂದಳು.

ಲೋಕಾಭಿರಾಮ ಬೆಕ್ಕಸ ಬೆರಗಾಗಿ,

"ಏನಮ್ಮಾ ವ್ಯವಹಾರ ?"

"ನಾನು ಇಲ್ಲಿಂದ ಯಾವಾಗ ಹೋಗುವುದು ?"

"ನಾಳೆ ಬೆಳಗ್ಗೆ."

"ನನ್ನ ರೇಟ್ ಗಂಟೆಗೆ ನೂರು ರೂಪಾಯಿ!"

ಲೋಕಾಭಿಯ ನಾಲಗೆ ಗಂಟಲಲ್ಲಿ ಸಿಕ್ಕಿಕೊಂಡಿತು.

ಸಾಹುಕಾರರು ಲೋಕಾಭಿಯನ್ನು ನುಂಗಿಬಿಡುವಂತೆ ನೋಡಿದರು.

"ಇದೇನ್ರಮ್ಮಾ - ನಿಮ್ಮ..."

"ಏನೂ ಇಲ್ಲ ಲೋಕಾಭಿರಾಮ್. ನನ್ನನ್ನು ನೀವು ಸೂಳೆ ಮಾಡುತ್ತಿದ್ದೀರಿ - ಸರಿಯಾದ ಸೂಳೆಯೇ ಆಗುತ್ತೇನೆ. ಸೂಳೆಯರಿಗೆ ಬೇಕಾದುದೇನು .. ಹಣ!"

ಲೋಕಾಭಿರಾಮ ಆರ್ತಧ್ವನಿಯಿಂದ,

"ಏನು ಸ್ವಾಮಿ" ಎಂದ.

ಸಾಹುಕಾರರು ಉಭಯ ಸಂಕಟಕ್ಕೆ ಸಿಕ್ಕಿಕೊಂಡಿದ್ದರು.

ಮೋಹಿನಿಯನ್ನು ಬಿಡಲು ಮನಸ್ಸಿಲ್ಲ!

ಅವಳು ಕೇಳುತ್ತಿದ್ದ ಹಣ ಕೊಡಲು ಇಷ್ಟವಿಲ್ಲ!

"ಹೇಗೂ ಬಂದಿದ್ದಾಳೆ - ಸಂಜೆಗೆ ಹೋಗಿಬಿಡಲಿ ಲೋಕಾಭಿ."

"ಸಂಜೆ ಎಷ್ಟು ಹೊತ್ತಿಗೆ ?"

ಎಂದು ಮೋಹಿನಿ ಕೇಳಿದಳು.

"ಆರಕ್ಕೆ"

ಮೋಹಿನಿ ತನ್ನ ಕೈಗಡಿಯಾರ ನೋಡಿಕೊಂಡು,

"ಈಗ ಎರಡು - ಆರು ಎಂದರೆ ನಾಲ್ಕು ಗಂಟೆಗಳು – ನಾನೂರು ರೂಪಾಯಿ - ಮೊದಲೇ ಕೊಟ್ಟುಬಿಡಬೇಕು."

ಸಾಹುಕಾರರು ಮೋಹಿನಿಯತ್ತ ತಿರುಗಿ,

"ಮೋಹಿನಿ, ನೀನು ನನ್ನ ಹತ್ತಿರ ವ್ಯಾಪಾರ ಮಾಡಕೂಡದು. ನಾನು ಎಂಥ ಮನುಷ್ಯ ಎನ್ನುವುದನ್ನು ನೀನು ಲೋಕಾಭಿಯನ್ನು ಕೇಳಿ ತಿಳಿದುಕೋ. ನನಗೆ ನಿನ್ನ ಮೇಲೆ ವಿಶ್ವಾಸ ಹುಟ್ಟಿದರೆ ನಿನ್ನ ಉದ್ದಕ್ಕೂ ಹಣ ಸುರಿಯಲು ಸಿದ್ಧನಾಗಿದ್ದೇನೆ."

“ಅದೆಲ್ಲಾ ಬೇಡ್ರಿ - ಬಿಸಿನೆಸ್ ಈಸ್ ಬಿಸಿನೆಸ್ (Business is Business) - ನಾನು ಕೇಳಿದುದಕ್ಕೆ ಒಪ್ಪುವಿರಾ ಇಲ್ಲವೇ ?”

“ಮೋಹಿನಿ ಎಂದರೇನು ನಿನಗೆ ಗೊತ್ತೇ ?”

“ಗೊತ್ತು - ಪಿಶಾಚಿ.”

“ನೀನು ಧನಪಿಶಾಚಿ.”

“ಹೌದು.”

“ವ್ಯಾಪಾರ ಮಾಡಬೇಡ - ಸುಮ್ಮನೆ ಇರು - ಆಮೇಲೆ ನೋಡಿಕೊಳ್ಳೋಣ.”

“ನನಗೆ ನಿಮ್ಮ ಪಂಚಾಯ್ತಿ ಬೇಕಿಲ್ಲರೀ”

ಎಂದೆದ್ದ ಮೋಹಿನಿ ಬಾಗಿಲು ತೆಗೆದುಕೊಂಡು ಹೊರಟೇ ಹೋದಳು.

ಇಂಗು ತಿಂದ ಕಪಿಯಂತಾಗಿದ್ದ ಲೋಕಾಭಿರಾಮ,

“ಕರ್ಕೊಂಡು ಬರ್ಲೇ ಸ್ವಾಮಿ.”

“ಏನೂ ಬೇಡ - ಸುಮ್ಮನೆ ಕುಕ್ಕರಿಸು.”

ಎಂದು ಸಾಹುಕಾರರು ಗದರಿಕೊಂಡರು.

# ೧೮

ರಾಯಲ್ ಲಾಡ್ಜ್ ಬಿಟ್ಟು ಒಂದು ಟ್ಯಾಕ್ಸಿಯಲ್ಲಿ ನೇರವಾಗಿ ಕಲಾಕ್ಷೇತ್ರದ ಆಫೀಸಿಗೆ ಬಂದ ಮೋಹಿನಿ,

"ಟ್ರಂಕ್ ಕಾಲ್ ಮಾಡಬೇಕು ಸಾರ್." ಎಂದಳು.

"ನಿಮ್ಮ ಅಂಕಲ್ ವಿಷಯ ಕೇಳಿ ಬಹಳ ವ್ಯಸನವಾಯಿತು ಮೋಹಿನಿ. ಟ್ರಂಕ್‌ಕಾಲ್ ಮಾಡಿ"

ಎಂದು ಹೇಳಿ ಹೊರಗೆ ಹೊರಟು ಹೋದರು.

ಮೋಹಿನಿ ಕಾಲ್‌ಗಾಗಿ ಮುಕ್ಕಾಲು ಗಂಟೆ ಕಾಯಬೇಕಾಯಿತು.

'ಹೆಲೋ'

'ಹೆಲೊ'

'ಅಂಕಲ್ಲೇನು?'

'ಮೋಹಿನಿ !'

'ಹೌದು ನಾನೇ !'

'ಏನು ವಿಶೇಷ ?'

'ನೀವು ಹೇಗಿದ್ದೀರಿ ?'

'ನನಗೇನಾಗಿದೆ. ಚೆನ್ನಾಗಿಯೇ ಇದ್ದೇನಲ್ಲಾ !'

'ನರದೌರ್ಬಲ್ಯದಿಂದ ನೀವು ಮಲಗಿದ್ದಿ ರಿ - ಸಖತ್ ಕಾಹಿಲೆ ಎಂದು ಲೋಕಾಭಿರಾಮ ಹೇಳಿದನಲ್ಲಾ!'

'ಸ್ಕೌಂಡ್ರಲ್ (Scoundrel) - ಅವನು ಅಲ್ಲಿಗೆ ಬಂದಿದ್ದಾನೆಯೇ.'

'ಹೂ ! ನಿಮಗೆ ಗೊತ್ತಿಲ್ಲವೇ ?'

'ಇಲ್ಲ. ಭತ್ತ ತರಬೇಕು - ಮೈಸೂರಿಗೆ ಹೋಗುತ್ತೇನೆ ಎಂದು ನನಗೆ ಹೇಳಿದ. ಅಲ್ಲಿ ಏಕೆ ಬಂದಿದ್ದಾನೆ.'

'ಹೇಳಲೇ ?'

'ಹೇಳು.'

'ಯಾರೋ ನಿಟ್ಟೂರು ಸಾಹುಕಾರರು ನಂಜಯ್ಯನವರಂತೆ – ಅವರನ್ನು ಕರೆದುಕೊಂಡು ಬಂದಿದ್ದಾನೆ'

'ಏಕೆ ?'

'ಏಕೆ ನೀವೇ ಹೇಳಿ.'

'ನನಗೆ ಗೊತ್ತಿಲ್ಲ.'

'ನನ್ನನ್ನು ನೋಡುವುದಕ್ಕೆ.'

'ನೋಡಿದೆಯಾ ?'

'ಇಲ್ಲ - ಮುಖಪ್ರಕ್ಷಾಳನ ಮಾಡಿದೆ.'

'ಸರಿ.'

'ಒಳ್ಳೆಯ ಶಿಷ್ಯನನ್ನು ಸಾಕಿದ್ದೀರಿ ಬಿಡಿ'

'ಸಾರಿ (Sorry) - ಮೋಹಿನಿ, ಅವನು ಇಲ್ಲಿಗೆ ಬರಲಿ ನಾನು ವಿಚಾರಿಸಿಕೊಳ್ಳುತ್ತೇನೆ.'

'ನೀವು ಬೇಗ ಇಲ್ಲಿಗೆ ಬರುವಿರೋ ಇಲ್ಲವೋ ?'

'ಮುಂದಿನ ವಾರ ಖಂಡಿತ ಬರುತ್ತೇನೆ. '

ಎಕ್ಸ್‌ಚೇಂಜ್ ಕ್ಲಾರ್ಕ್,

'ಮುಂದುವರಿಸಲೇ' ಎಂದು ಕೇಳಿದ.

'ಬೇಡ - ಸಾಕು'

ಎಂದು ಮೋಹಿನಿ ರಿಸೀವರ್ ಕೆಳಗಿಟ್ಟಳು.

ಮೋಹಿನಿ ಹೊರಗೆ ಬರಲು ವೆರಾಂಡದಲ್ಲಿ ನಿಂತಿದ್ದ ದಾಮೋದರನ್,

"ನಿಮ್ಮ ಅಂಕಲ್ ಹೇಗಿದ್ದಾರೆ ಮೋಹಿನಿ ?" ಎಂದು ಕೇಳಿದರು.

"ಭಯಕ್ಕೆ ಕಾರಣವಿಲ್ಲವಂತೆ - ಹವಾ ಬದಲಾವಣೆಯಾಗಬೇಕು ಎಂದು ಡಾಕ್ಟರು ಹೇಳಿದರಂತೆ - ಮುಂದಿನ ವಾರ ಇಲ್ಲಿಗೆ ಬರುತ್ತಾರೆ."

"ಥ್ಯಾಂಕ್ ಗಾಡ್ (Thank God)"

ಹಾಸ್ಟಲ್ಲಿಗೆ ಬಂದ ಮೋಹಿನಿ ಕಲಾವತಿಗೆ,

"ನಮ್ಮ ಅಂಕಲ್‌ಗೆ ಟ್ರಂಕ್‌ಕಾಲ್ ಮಾಡಿದ್ದೆ ಕಲಾ – ಭಯಕ್ಕೆ ಕಾರಣವಿಲ್ಲ ಎಂದರು - ಮುಂದಿನ ವಾರ ಇಲ್ಲಿಗೆ ಬರುತ್ತಾರಂತೆ !"

“ಈಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು ಮೋಹಿನಿ. ಏಳು -ಊಟ ಮಾಡೋಣ.”

“ನೀವಿನ್ನೂ ಊಟ ಮಾಡಿಲ್ಲವೇ?”

“ಇಲ್ಲ.”

“ಏಕೆ ?”

“ನಿಮಗಾಗಿ ಕಾಯುತ್ತಿದ್ದೆ.”

ಕಲಾವತಿಯನ್ನಪ್ಪಿ ಮೋಹಿನಿ,

“ನಿಮ್ಮಂಥ ಸ್ನೇಹಿತರು ಸಿಕ್ಕಿದುದು ನನ್ನ ಪುಣ್ಯ ಕಲಾ” ಎಂದಳು.

ಸಂಜೆಯಾಯಿತು.

ಹೋಟಲ್ ಕಾಂಪೌಂಡಿನಲ್ಲಿ ಕಾರುಗಳ ಓಡಾಟ ಹೆಚ್ಚಿತು.

ಕಂಠಪೂರ್ತಿ ಪಾನಮಾಡಿ ಹಾಸಿಗೆಯ ಮೇಲೆ ಬಿದ್ದಿದ್ದ ನಂಜಯ್ಯನವರು, ಎದ್ದು ತೂರಾಡಿಕೊಂಡು ಬಂದು ಕುರ್ಚಿಯ ಮೇಲೆ ಕುಳಿತು,

“ಲೋಕಾಭಿ” ಎಂದರು.

“ಸ್ವಾಮಿ.. ...”

“ಗಿಲೀಟ್ ನನ್ಮಗನೇ - ಗ್ಲಾಸಿಗೆ ’ಸ್ತ್ರೀರಾಮ’ ಹಾಕು”

“ಸಾಕು ಸ್ವಾಮಿ - ಈಗಲೇ...”

“ಹೇಳಿದ ಮಾತು ಕೇಳ್ತೀಯೋ ಒದ್ದು ಬಿಡಲೋ ?”

ಲೋಕಾಭಿರಾಮ ಗ್ಲಾಸಿಗೆ ವಿಸ್ಕಿ ಬಗ್ಗಿಸಿ ಸಾಹುಕಾರರ ಕೈಗೆ ಕೊಟ್ಟ,

ಸಾಹುಕಾರರು ಸ್ವಲ್ಪ ಸ್ವಲ್ಪ ಸೇವಿಸುತ್ತ ಕುಳಿತರು.

“ಗಂಟೆಯೆಷ್ಟೋ ಈಗ?”

“ಆರು - ಆರೂವರೆ ಇರಬಹುದು ಸ್ವಾಮಿ”

“ಕೊನೆಗೂ ನನಗೆ ೪೨೦ ಮಾಡಿಬಿಟ್ಟೆ!”

“ನಾನೇನು ಮಾಡಲಿ ಸ್ವಾಮಿ - ಎಲ್ಲಾ ನೀವೇ ನೋಡಿದಿರಲ್ಲಾ!”

“ಅವಳ ವಿಷಯ ಸರಿಯಾಗಿ ಏಕೆ ತಿಳಿದುಕೊಳ್ಳಲಿಲ್ಲ.”

“ಅದೇ ನಾನು ಮಾಡಿದ ಪೆಚ್ಚು ಕೆಲಸ.”

“ಬೇಗ ಹೋಗಿ ಎರಡು ಮಾಲ್ ಹಿಡಿದುಕೊಂಡು ಬಾ”

"ಎರಡೇಕೆ ಸ್ವಾಮಿ ?"

"ಸವಾಲ್ ಹಾಕಬೇಡ - ಹೇಳಿದಷ್ಟು ಮಾಡು."

ಲೋಕಾಭಿರಾಮ ಮೇಲಕ್ಕೇಳಲು,

"ಮ್ಯಾನೇಜರಿಗೆ ಇನ್ನೆರಡು ಬಾಟಲ್ ಕಳಿಸುವಂತೆ ಹೇಳು – ಬೆಳಗ್ಗೆ ಊರಿಗೆ ಹೊರಟುಬಿಡೋಣ."

"ಅಪ್ಪಣೆ ಸ್ವಾಮಿ"

ಎಂದು ಲೋಕಾಭಿರಾಮ ಆಫೀಸಿಗೆ ಹೋಗಿ ಸದಾಶಿವಂನನ್ನು ಕಾಣಲು,

"ಬಂದ ಮಾಲು ಏಕೆ ಹೊರಟು ಹೋಯಿತು ಲೋಕಾಭಿರಾಮ್"

ಎಂದು ಸದಾಶಿವಂ ಕೇಳಿದ.

ಮೋಹಿನೀ ವೃತ್ತಾಂತವನ್ನು ಲೋಕಾಭಿರಾಮ ಸೂಕ್ಷ್ಮವಾಗಿ ನಿರೂಪಿಸಲು ಆಶ್ಚರ್ಯಚಕಿತನಾದ ಸದಾಶಿವಂ,

"ಅಪ್ಪಡಿಯಾ ?" ಎಂದ.

## ೧೯

ಬೆಂಗಳೂರು ತಲುಪಿದ ಮೇಲೆ ಮೂರು ದಿನ ಲೋಕಾಭಿರಾಮ 'ದಿಲ್‌ರುಬಾ' ಕಡೆ ಸುಳಿಯಲಿಲ್ಲ.

ನಾಲ್ಕನೆಯ ಸಂಜೆ 'ಸ್ತ್ರೀರಾಮ'ನಗೀಳು ಹಿಡಿದು, ಅನನು ಹೆದರಿಕೊಂಡೇ 'ದಿಲ್‌ರುಬಾ'ಕ್ಕೆ ಬಂದ.

ಸಾಹುಕಾರರು ಅವನನ್ನು ಅತ್ಯಂತ ಹಾರ್ದಿಕತೆಯಿಂದ ಸ್ವಾಗತಿಸಿ,

"ಎಲ್ಲಿ ಹೋಗಿಬಿಟ್ಟಿದ್ದೆಯಯ್ಯಾ - ಇಷ್ಟು ದಿವಸ?" ಎಂದು ಕೇಳಿದರು.

"ಎಷ್ಟು, ದಿವಸ ಸ್ವಾಮಿ - ಒಂದು ವಾರವಾಯಿತು - ಅಷ್ಟೆ !"

"ಭತ್ತ ತಂದೆಯಾ ?"

"ತಂದೆ"

"ಎಷ್ಟು ಪಲ್ಲ?"

"ಬಡವರದ್ದು ಎಷ್ಟಿರತ್ತೆ ಸ್ವಾಮಿ - ಐದು ಪಲ್ಲ ತಂದೆ."

"ಒಳಗೆ ಹೋಗೋಣ ನಡೀ - ಫಸ್ಟ್ ಕ್ಲಾಸ್ ಮಿಲಿಟ್ರಿ ರಮ್ ತರಿಸಿಟ್ಟಿದ್ದೀನಿ" ಎಂದರು

ಲೋಕಾಭಿರಾಮನೇ ಒಳಗೆ ಹೋಗಿ 'ಪಾನಕಪೂಜೆ'ಯ ವ್ಯವಸ್ಥೆ ಮಾಡಿದ.

ಪೂಜೆ ಮೊದಲನೆಯ ಘಟ್ಟ ಕಳೆದು, ಎರಡನೆಯ ಘಟ್ಟ ಮುಟ್ಟಿತ್ತು.

"ಮಂತ್ರಿಮಂಡಳದ ಹಣೆಯ ಬರಹ ಏನಾಗತ್ತೆ ಸ್ವಾಮಿ ?"

"ನನ್ನ ಕೃಪೆ ಇರುವವರೆಗೆ ಮಂತ್ರಿಮಂಡಳ ಅಲ್ಲಾಡಿಸುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ ಲೋಕಾಭಿ - ಎಲ್ಲರೂ ಸೇರಿದರು – ಎರಡು ಮೂರು ದಿನ ಬೆಂಗಳೂರಿನಲ್ಲಿ ರಸಕವಳ ಗಿಟ್ಟಿಸಿದರು - ಕಂಠಪೂರ್ತಿ ಗುಂಡು ಹಾಕಿದರು - ಗಂಟಲು ಒಣಗುವವರೆಗೆ ಹರಟೆ ಹೊಡೆದರು - ತಮ್ಮ ತಮ್ಮ ಊರಿಗೆ ಹೋದರು."

"ಸುಮ್ಮನೆ ಇವರನ್ನೆಲ್ಲಾ ಆಚೆಗೆ ಕಳಿಸಿ ನೀವು ಮುಖ್ಯ ಮಂತ್ರಿಗಳಾದರೆ ಚೆನ್ನಾಗಿರುತ್ತದೆ ಸ್ವಾಮಿ. ನಿಮ್ಮನ್ನೇ ನಂಬಿಕೊಂಡಿರುವ ನಮ್ಮಂಥ ನಾಲ್ಕು ಜನ ಬದುಕಿಕೊಳ್ಳುತ್ತೇವೆ."

"ನೀನು ಬದುಕಿಕೊಳ್ಳುವುದಕ್ಕೆ ನಾನು ಮುಖ್ಯ ಮಂತ್ರಿಯಾಗಬೇಕಾಗಿಲ್ಲ ಲೋಕಾಭಿ, ನಿನಗೇನು ಬೇಕೋ ಅದನ್ನು ಈಗಲೇ ಮಾಡಿಸಬಲ್ಲೆ. ಆದರೆ ನೀನು ಶುದ್ಧ ಅಯೋಗ್ಯ -

ಯಾವದನ್ನೂ ಊರ್ಜಿತಪಡಿಸಿಕೊಳ್ಳುವುದಿಲ್ಲ. ಜುಜಬಿ ವ್ಯವಹಾರ ಮಾಡಿಕೊಂಡೇ ಕಾಲ ತಳ್ಳುತ್ತೀ."

"ನನ್ನ ಪೇಪರ್ ಪುನಃ ಸ್ಟಾರ್ಟ್ (Start) ಮಾಡಲೇನು ಸ್ವಾಮಿ."

"ಪೇಪರ್ ಸ್ಟಾರ್ಟ್ ಮಾಡಿ, ಅದನ್ನು ಚೆನ್ನಾಗಿ ಅಭಿವೃದ್ಧಿಗೊಳಿಸು - ಸರ್ಕಾರದ ಜಾಹೀರಾತುಗಳನ್ನು ಕೊಡಿಸುತ್ತೇನೆ, ಸ್ಕೂಲುಗಳಿಗೆ, ಗ್ರಾಮ ಪಂಚಾಯಿತಿಗಳಿಗೆ, ತಾಲ್ಲೂಕು ಬೋರ್ಡಿಗೆ ನಿನ್ನ ಪೇಪರ್ ಕೊಳ್ಳುವ ಹಾಗೆ ಮಾಡುತ್ತೇನೆ ಎಂದು ನಾನು ಎಷ್ಟು ಸಲ ಹೇಳಿಲ್ಲ."

"ಕಾಲ ಬರಲಿ ಎಂದು ಸುಮ್ಮನಿದ್ದೆ. ನನಗೂ ಗ್ರಹಗತಿ ಚೆನ್ನಾಗಿರಲಿಲ್ಲ."

"ನಿನ್ನ ಗ್ರಹಗತಿ ಚೆನ್ನಾಗೋದೇ ಇಲ್ಲ."

"ಹಾಗನ್ನಬೇಡಿ ಸ್ವಾಮಿ - ನಿಮ್ಮ ಬಾಯಲ್ಲಿ ಬಂದದ್ದು ಕುರ್ತೇಟು."

"ಹೋಗಲಿ - ಮದರಾಸಿಗೆ ಯಾವಾಗ ಹೋಗೋಣ."

"ತಾವು ಯಾವಾಗ ಅಪ್ಪಣೆ ಮಾಡಿದರೆ ಆಗ."

"ನಾಳೆ ಬುಧವಾರ - ಬೇಡ; ಗುರುವಾರ ರಾತ್ರಿ ಹೊರಟುಬಿಡೋಣ- ನೀನು ಸದಾಶಿವಂಗೆ ವೈರ್ ಮಾಡಿ ನಮ್ಮ ಮಾಮೂಲ್ ರೂಮುಗಳನ್ನು ರಿಸರ್ವ್ ಮಾಡಿಸು."

'ಸದ್ಯ - ಸಾಹುಕಾರರಿಗೆ ಮದರಾಸಿನ ಪ್ರಸಂಗ ಗೊತ್ತಾಗಿಲ್ಲ - ಬದುಕಿದೆಯಾ ನನ್ನ ಬಡಜೀವವೇ?'

ಎಂದು ಲೋಕಾಭಿರಾಮ ಎದೆ ನೀವಿಕೊಂಡ.

ಮಾರನೆಯ ಬೆಳಿಗ್ಗೆ ಹತ್ತು ಗಂಟೆಗೆ ಸಾಹುಕಾರರು ಮದರಾಸಿಗೆ ಟ್ರಂಕ್‌ಕಾಲ್ ತೆಗೆದುಕೊಂಡು, ಮೋಹಿನಿಯನ್ನು ಫೋನ್ ಬಳಿಗೆ ಕರೆದರು.

'ಅಂಕಲ್ಲೇನು?'

'ಹೌದು ಮೋಹಿನಿ.'

'ಏನು ಸಮಾಚಾರ ?'

'ನಾನು ನಾಳೆ ರಾತ್ರಿ ಹೊರಟು, ನಾಡಿದ್ದು ಬೆಳಿಗ್ಗೆ ಮದರಾಸಿಗೆ ಬರುತ್ತೇನೆ.'

'ತುಂಬ ಸಂತೋಷ.'

'ಬೆಳಿಗ್ಗೆ ಕಾರ್ ಎಲ್ಲಿಗೆ ಕಳಿಸಿಕೊಡಲಿ.'

'ಹಾಸ್ಟಲ್ಲಿಗೆ ಕಳಿಸಿಕೊಡಿ.'

'ನೀನು ಮೂರು ನಾಲ್ಕು ದಿವಸ ರಜಾ ತೆಗೆದುಕೋ.'

'ಆಗಲಿ.'

'ಲೋಕಾಭಿಯನ್ನೂ ಜತೆಯಲ್ಲಿ ಕರೆದುಕೊಂಡು ಬರುತ್ತೇನೆ.'

'ಆ ಚಂಡಾಲನನ್ನೇಕೆ ಕರೆದುಕೊಂಡು ಬರುವಿರಿ ?'

'ಕಾರಣ ಇದೆ - ನಾನು ಬಂದ ಮೇಲೆ ನಿನಗೇ ಗೊತ್ತಾಗುತ್ತದೆ.'

'ನಿಮ್ಮ ಇಷ್ಟ.'

'ನೀನು ಯಾವ ಅಸಮಾಧಾನವನ್ನೂ ಅವನ ಮುಂದೆ ವ್ಯಕ್ತಮಾಡಬೇಡ. ಹಿಂದೆ ಹೇಗಿದ್ದೆಯೋ ಹಾಗೇ ಇದ್ದು ಬಿಡು.'

'ಅವನ ಮುಖ ಕಂಡರೆ ನನಗೆ ಬೆಂಕಿ ಬೆಂಕಿಯಾಗತ್ತಲ್ಲಾ!'

'ಅವನಿಗೆ ನಾನು ಸರಿಯಾಗಿ - ನಿನ್ನ ಮುಂದೆಯೇ ಬುದ್ಧಿ ಕಲಿಸುತ್ತೇನೆ.'

'ಹಾಗಾದರೆ ಸರಿ" ಎಂದಳು.

ಸಾಹುಕಾರರು ಗುರುವಾರ ರಾತ್ರಿ ಕಾರಿನಲ್ಲಿ ಲೋಕಾಭಿರಾಮನೊಂದಿಗೆ ಹೊರಟು ಶುಕ್ರವಾರ ಬೆಳಿಗ್ಗೆ ಮದರಾಸ್ ತಲುಪಿದರು.

# ೨೦

ಬೆಳಿಗ್ಗೆ ಮೋಹಿನಿಯನ್ನು ಕರೆತರಲು ಸಾಹುಕಾರರು ಲೋಕಾಭಿರಾಮನನ್ನೇ ಕಳಿಸಿಕೊಟ್ಟರು.

ಮೋಹಿನಿ ಒಂದು ಸಣ್ಣ ಸೂಟ್‌ಕೇಸ್‌ಗೆ ತನ್ನ ಬಟ್ಟೆಗಳನ್ನು ಹಾಕಿಕೊಂಡು, ಹೊರಗೆ ಹೊರಡಲು ಸಿದ್ಧಳಾಗಿದ್ದಳು.

ಮೋಹಿನಿಯನ್ನು ಕಾರಿನಲ್ಲಿ ಕೂಡಿಸಿಕೊಂಡು ಹೊರಟ ಲೋಕಾಭಿರಾಮ, ಸ್ವಲ್ಪ ದೂರ ಬಂದ ಮೇಲೆ ಮೆಲ್ಲನೆ,

"ನಿಮ್ಮಿಂದ ನನಗೆ ಒಂದು ಉಪಕಾರವಾಗಬೇಕ್ರಮ್ಮಾ."

"ಒಂದೊಮ್ಮೆ ಕೇಳಿದಂಥ ಉಪಕಾರವೇ ?"

"ಅಲ್ಲ ಕಣ್ರಮ್ಮ ನಾನು ಮಣ್ಣು ತಿನ್ನುವ ಕಲಸ ಮಾಡಿದೆ. ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ. ಸಾಹುಕಾರರ ಹತ್ತಿರ ಯಾವ ವಿಷಯವನ್ನೂ ಹೇಳಬೇಡಿ - ಈಗ ನನಗೆ ಅವರೇ ಆಧಾರ. ಅವರೂ ಕೈಬಿಟ್ಟರೆ ನಾನು ಪರದೇಶಿಯಾಗುತ್ತೇನೆ."

ಅವನ ತಂತ್ರವನ್ನೇ ಬಳಸಿಕೊಂಡ ಮೋಹಿನಿ,

"ನಾನೇಕೆ ಹೇಳುವುದಕ್ಕೆ ಹೋಗಲಿ ಲೋಕಾಭಿರಾಮ್. ನಿಮ್ಮ ಹೊಟ್ಟೆಯ ಮೇಲೆ ಹೊಡೆದರೆ ನನಗೆ ಬರುವ ಲಾಭವೇನು ?" ಎಂದಳು.

"ನೀವು ಒಳ್ಳೆಯವರಮ್ಮ - ಬಡವರಾಧಾರಿಗಳು."

ರೂಮಿಗೆ ಬಂದ ಮೋಹಿನಿಯನ್ನು ಆದರದಿಂದ ಸ್ವಾಗತಿಸಿದ ಸಾಹುಕಾರರು,

"ನಿನ್ನ ಬಟ್ಟೆಗಳನ್ನೂ ತಂದಿದ್ದೀ - ಒಳ್ಳೆಯ ಕೆಲಸ ಮಾಡಿದೆ."

"ಚೆನ್ನಾಗಿದ್ದೀರಾ ?"

"ಇದ್ದೇನೆ - ತಿಂಡಿ ಕಾಫಿ ಆಯಿತೇ ?"

"ಏನೂ ತೆಗೆದುಕೊಂಡಿಲ್ಲ - ಸ್ನಾನ ಮುಗಿಸಿಕೊಂಡು ಸಿದ್ಧವಾಗಿದ್ದೆ."

ಸಾಹುಕಾರರು ಲೋಕಾಭಿರಾಮನನ್ನು ಕರೆದು,

"ತಿಂಡಿ ಕಾಫಿ ತರಿಸು" ಎಂದರು.

"ಇಲ್ಲಿಗೆ ಬರುವಾಗ ಲೋಕಾಭಿರಾಮ ನನ್ನ ಕಾಲಿನ ಮೇಲೆ ಬಿದ್ದು ನಿಮಗೆ ಯಾವ ವಿಷಯವನ್ನೂ ತಿಳಿಸಕೂಡದೆಂದು ಬೇಡಿಕೊಂಡ."

"ಈಗ ಆ ಮಾತು ಬೇಡ. ಮಧ್ಯಾಹ್ನ ಅವನನ್ನು ವಿಚಾರಿಸಿಕೊಳ್ಳುತ್ತೇನೆ."

"ನೀವು ಗುಂಡು ಹಾಕುವುದಕ್ಕೆ ಷುರು ಮಾಡಿಬಿಡಬೇಡಿ."

"ಇನ್ನೇನು ಮಾಡೋಣ."

"ಪೇಟೆ ಕಡೆ ಹೋಗಿ ಬರೋಣ, ನನಗೆ ಸ್ವಲ್ಪ ಬಟ್ಟೆ ಬರೆ ಬೇಕಾಗಿದೆ."

"ಹೋಗಿ ಬರೋಣ"

"ಲೋಕಾಭಿ ಬೇಡ - ನಾವಿಬ್ಬರೇ ಹೋಗೋಣ."

"ಅದೇ ತಪ್ಪು - ಅನುಮಾನ ಪಡುವುದಕ್ಕೆ ನಾವು ಅವನಿಗೆ ಎಳ್ಳಷ್ಟೂ ಅವಕಾಶ ಕೊಡಬಾರದು."

"ನೀವು ಅವನಿಗೆ ದೊಡ್ಡ ಉಡುಗೊರೆಯೇ ಇಟ್ಟಿರುವ ಹಾಗೆ ಕಾಣುತ್ತದೆ."

"ಆ ಉಡುಗೊರೆ ನಿನ್ನ ಕೈಯಿಂದಲೇ ಕೊಡಿಸುತ್ತೇನೆ ಸುಮ್ಮನಿರು"

ಎಂದು ಸಾಹುಕಾರರು ನಕ್ಕರು.

ಪೇಟೆಯಲ್ಲಿ ತನಗೆ ಅವಶ್ಯಕವಾಗಿ ಬೇಕಿದ್ದ ಕೆಲವು ನಿತ್ಯೋಪಯೋಗೀ ವಸ್ತುಗಳನ್ನು ಕೊಂಡ ಮೋಹಿನಿ, ಜವಳಿ ಅಂಗಡಿಗೆ ಬಂದು ಇಂದೇ ಮಾದರಿಯ ಎರಡು ಧರ್ಮಾವರದ ಸೀರೆಗಳನ್ನಾಯ್ದಳು.

"ಒಂದೇ ಮಾದರಿಯದು ಎರಡೇಕೆ ? ಬೇರೆ ಬೇರೆ ಬಣ್ಣಗಳನ್ನು ತೆಗೆದುಕೋ"

ಎಂದು ಸಾಹುಕಾರರು ಹೇಳಲು ಮೋಹಿನಿ,

"ಒಂದು ನನಗೆ. ಇನ್ನೊಂದು ಗೆಳತಿ ಕಲಾವತೀಗೆ."

"ಹಾಗಾದರೆ ಸರಿ"

ಸಾಹುಕಾರರು ಲೋಕಾಭಿರಾಮನನ್ನು ಕಳಿಸಿ ಬಗೆಬಗೆಯ ಹಣ್ಣುಗಳನ್ನು ತರಿಸಿದರು.

ಎಲ್ಲರೂ ಹೊಟೇಲಿಗೆ ಹಿಂದಿರುಗುವ ವೇಳೆಗೆ ಗಂಟೆ ಹನ್ನೆರಡಾಯಿತು.

"ಟೇಬಲ್ ರೆಡಿ ಮಾಡು ಲೋಕಾಭಿ"

ಎಂದು ಸಾಹುಕಾರರು ಅಪ್ಪಣೆ ಕೊಡಿಸಿದರು.

'ಪಾನಕಪೂಜೆ' ಒಳ್ಳೆಯ ಉತ್ಸಾಹದಲ್ಲಿ ಆರಂಭವಾಯಿತು.

ಲೋಕಾಭಿರಾಮ ಸ್ವರ್ಗದ ದಾರಿಯಲ್ಲಿ ನಡೆದಿದ್ದ.

'ಪಾನಕಪೂಜೆ' ಒಂದು ಹದಕ್ಕೆ ಬಂದು ಲೋಕಾಭಿರಾಮ ಲಾವಣಿ ಹೇಳುವ ಮಟ್ಟಕ್ಕೆ ಬರಲು ಸಾಹುಕಾರರು ಥಟ್ಟನೆ,

"ನಂಜಯ್ಯ ಹೇಗಿದ್ದಾನೆ ಲೋಕಾಭಿ" ಎಂದರು.

ಲೋಕಾಭಿ ಕಣ್ಣರಳಿಸಿಕೊಂಡು,

"ಯಾವ ನಂಜಯ್ಯ ಸ್ವಾಮಿ?" ಎಂದ.

"ನಿನ್ನ ಸಾಹುಕಾರ - ಅವನ ಮೇಲೆ ನೀನು ಲಾವಣಿ ಬರೆದಿಲ್ಲವೇನೋ?"

ಲೋಕಾಭಿರಾಮ ಉಗುಳು ನುಂಗಿಕೊಳ್ಳುತ್ತ,

"ಈಚೆಗೆ ನಾನವರನ್ನು ನೋಡಿಲ್ಲ ಸ್ವಾಮಿ."

"ಹೋದ ವಾರ ಅವನನ್ನೂ ಕರೆದುಕೊಂಡು ಇಲ್ಲಿಗೆ ಬಂದಿದ್ದೆಯಂತೆ!"

"ಯಾರು ಸ್ವಾಮಿ ನಿಮಗೆ ಹೇಳಿದ್ದು. ರಾಮಾಂತ ನಾನು ಮೈಸೂರಿನಲ್ಲಿ ಕೂತಿದ್ದೆ - ಇಲ್ಲಿಗೆ ಬಂದಿದ್ದೆನೇ?"

"ನಿಜ ಹೇಳದಿದ್ದರೆ ನಿನ್ನ ಚಮಡಾ ಸುಲಿದುಬಿಡುತ್ತೇನೆ ಸೂಳೇ ಮಗನೇ - ನೀನು ಲೋಕಾಭಿರಾಮನಲ್ಲ, ನಮ್ಮಕ್ ಹರಾಮ್."

ಕುರ್ಚಿಯಿಂದ ಕೆಳಗಿಳಿದ ಲೋಕಾಭಿರಾಮ, ಸಾಹುಕಾರರ ಎರಡು ಪಾದಗಳನ್ನೂ ಬಿಗಿಯಾಗಿ ಅಪ್ಪಿಕೊಂಡು,

"ಮಣ್ಣು ತಿನ್ನುವ ಕೆಲಸ ಮಾಡಿದೆ ಸ್ವಾಮಿ, ಕ್ಷಮಿಸಿ. ನಿಮ್ಮ ಗುಲಾಮ - ನಿಮ್ಮ ಎಕ್ಕಡ ಹೊಲೆಯುವವನು - ನಿಮ್ಮ ಮಗ..."

"ಜನ್ಮಜನ್ಮಾಂತರಕ್ಕೂ ನಿನ್ನಂಥ ಮಗ ಬೇಡಯ್ಯಾ."

"ಈ ಸಾರೆ ಕ್ಷಮಿಸಿಬಿಡಿ ಸ್ವಾಮಿ"

"ನಿನ್ನ ಕ್ಷಮಿಸಬೇಕಾದವನು ನಾನಲ್ಲ. ಮೋಹಿನಿ ಕ್ಷಮೆ ಬೇಡಿಕೋ?"

ಲೋಕಾಭಿರಾಮ, ಮೋಹಿನಿಯ ಎರಡು ಪಾದಗಳನ್ನೂ ಹಿಡಿದು,

"ಕ್ಷಮಿಸಿ ತಾಯಿ, ನಿಮ್ಮ ಹಳೇ ಸೀರೆ ಒಗೆಯುವುದಕ್ಕೂ ನಾನು ಅರ್ಹನಲ್ಲ - ತಪ್ಪು ಮಾಡಿದೆ" ಎಂದ.

ಸಾಹುಕಾರರು ನಗುತ್ತಾ,

"ಹಾಳಾಗಿ ಹೋಗಲಿ ಏಳೋ - ಇನ್ನು ಮೇಲೆ ಇಂಥ ಕೆಲಸ ಮಾಡ ಬೇಡ" ಎಂದರು.

ಸಾಹುಕಾರರು ಮೂರು ದಿನ ಮದರಾಸಿನಲ್ಲಿದ್ದು ನಾಲ್ಕನೆಯ ದಿನ ಬೆಳಿಗ್ಗೆ ಮೋಹಿನಿಯನ್ನು ಕರೆತಂದು ಹಾಸ್ಟಲ್ಲಿನಲ್ಲಿ ಬಿಟ್ಟು, ಊರಿಗೆ ಪ್ರಯಾಣ ಬೆಳಸಿದರು.

ಭಾರತದ ವಿವಿಧ ಪ್ರಾಂತಗಳಲ್ಲಿದ್ದ ಕಮ್ಯುನಿಸ್ಟ್ ಪಾರ್ಟಿ ಶಾಖೆಗಳಲ್ಲಿ ಮದರಾಸಿನ ಶಾಖೆಗೆ ವಿಶಿಷ್ಟ ಸ್ಥಾನವಿತ್ತು. ಮದರಾಸ್ ಪಾರ್ಟಿಯ ಅಭಿಪ್ರಾಯಕ್ಕೆ ಕೇಂದ್ರ ಪಾರ್ಟಿಯೂ ತಲೆಬಾಗುತ್ತಿತ್ತು.

ಮದರಾಸ್ ಪಾರ್ಟಿಗೆ ಈ ಸ್ಥಾನಮಾನ ಗಳಿಸಿಕೊಟ್ಟಿದ್ದ ಕೀರ್ತಿ ಸಂಪೂರ್ಣವಾಗಿ ತಿರುಜ್ಞಾನಸಂಬಂಧಂಗೆ ಸೇರಬೇಕು.

ಕೀರ್ತಿಶೇಷ ಶ್ರೀಮಾನ್ ಎಸ್. ಶ್ರೀನಿವಾಸ ಅಯ್ಯಂಗಾರ್ಯರ ಕಾಲದಲ್ಲಿ ಸ್ವಯಂಸೇವಕನಾಗಿ ಕಾಂಗ್ರೆಸ್ ಸೇರಿದ ಸಂಬಂಧ ಕೆಲಕಾಲಾನಂತರ ಕಾಂಗ್ರೆಸ್ ಸ್ವಯಂಸೇವಕ ದಳದ ನಾಯಕನಾದ. ಅಸಹಕಾರ ಚಳುವಳಿಗಳಲ್ಲಿ ಭಾಗವಹಿಸಿ, ನಾಲ್ಕು ಬಾರಿ ಜೈಲುವಾಸವನ್ನನುಭವಿಸಿದ್ದ ನಿಷ್ಣಾತ ಕಾಂಗ್ರೆಸ್ ಭಕ್ತನಾಗಿ. ಕಾಂಗ್ರೆಸ್ಸಿನ ಸರ್ವತೋಮುಖ ಪ್ರಗತಿಗೆ ಕಾರಣರಲ್ಲಿ ಒಬ್ಬನಾಗಿದ್ದ ಸಂಬಂಧಂ, ಕಾಂಗ್ರೆಸ್ ಅಧಿಕಾರಕ್ಕೆ ಬಂದ ಕೂಡಲೆ ತನ್ನ ಸೇವೆ, ನಿಷ್ಠೆ, ತ್ಯಾಗ ಪರಿಗಣನೆಗೆ ಬರುವುದೆಂದು ಭಾವಿಸಿದ್ದ.

ಆದರೆ ಕಾಂಗ್ರೆಸ್ ಅವನಿಗೆ 'ಕಾಂಗ್ರೆಸ್' ಮಾಡಿಬಿಟ್ಟಿತು. ಕಾಂಗ್ರೆಸ್ ಅಧಿಕಾರ ಸೂತ್ರಗಳನ್ನು ವಹಿಸಿಕೊಂಡು, ಮಂತ್ರಿ ಮಂಡಳ ರಚಿಸಿದ ಮೇಲೆ ಸಂಬಂಧಂನನ್ನು ಸಂಪೂರ್ಣವಾಗಿ ಮರೆತುಬಿಟ್ಟಿತು.

ಕೋಪೋದ್ದೀಪನಗೊಂಡ ಸಂಬಂಧಂ ತನ್ನ ಕೆಲವು ಅನುಯಾಯಿಗಳೊಂದಿಗೆ ಕಾಂಗ್ರೆಸ್ಸಿಗೆ ರಾಜೀನಾಮೆಯಿತ್ತುದಲ್ಲದೆ, ಕಮ್ಯುನಿಸ್ಟ್ ಪಾರ್ಟಿ ಸೇರಿ ಅದರ ಜನರಲ್ ಸೆಕ್ರೆಟರಿ ಆಗಿಬಿಟ್ಟ, ಸಂಬಂಧಂನನ್ನು ಬಿಟ್ಟು ಕೊಟ್ಟುದು ತಪ್ಪಾಯಿತೆಂದು ಹಿರಿಯ ಕಾಂಗ್ರೆಸ್ಸಿಗರ ಅನುಭವಕ್ಕೆ ಬಂದಿತು.

ಕಾರ್ಯ ಕೈಮಿಂಚಿ ಹೋಗಿತ್ತು.

ಹಾಲು ಉಕ್ಕಿ ಸುರಿದುಹೋಗಿತ್ತು.

ಮೂರು ವರ್ಷಗಳಲ್ಲಿ ಸಂಬಂಧಂ ಇಡಿಯ ತಮಿಳು ನಾಡಿನಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಶಾಖೆಗಳನ್ನು ತೆರೆದು, ತನ್ನ ಪಾರ್ಟಿಯನ್ನು ಕಾಂಗ್ರೆಸ್ಸಿನ ಪ್ರತಿಕಕ್ಷಿಯನ್ನಾಗಿ ಮಾಡಿದ.

ಈ ವೇಳೆಗೆ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಹುಟ್ಟಿಕೊಂಡ ಒಡಕು, ಸಂಬಂಧಂಗೆ ಅಗ್ರಸ್ಥಾನ ದೊರಕಿಸಿಕೊಟ್ಟು, ಅವನ ಕೀರ್ತಿ ಮಾಸ್ಕೋವರೆಗೆ ವಿಸ್ತರಿಸುವಂತೆ ಮಾಡಿತು.

ಭಾರತ ಸ್ವತಂತ್ರವಾದ ಮೇಲೆ ಕಮ್ಯುನಿಸ್ಟ್ ಪಾರ್ಟಿಯ ನಾಯಕರಲ್ಲಿ ದೃಷ್ಟಿಭೇದ ಸಂಭವಿಸಿತು. ಮಾರ್ಕ್ಸ್, ಲೆನಿನ್ ವಾದವನ್ನು ಭಾರತದ ಸಂಸ್ಕೃತಿ, ಅವಶ್ಯಕತೆಗಳಿಗನುಗುಣವಾಗಿ ಮಾರ್ಪಡಿಸಿಕೊಂಡು, ಭಾರತದ ಕಮ್ಯುನಿಸ್ಟ್ ಪಾರ್ಟಿಯನ್ನು ಸ್ವತಂತ್ರ ಸಂಸ್ಥೆಯನ್ನಾಗಿ ನಡೆಸೋಣ ಎನ್ನುವ ವಾದವೊಂದು. ಇದರ ಪುರಸ್ಕರ್ತರು, ಪಿ. ಸಿ. ಜೋಶಿ, ಡಾಂಗೆ.

ಕಮ್ಯುನಿಸ್ಟ್ ವಿಚಾರಲಹರಿ ಸಾರ್ಥಕವಾದುದೇ ರಷ್ಯಾದಲ್ಲಿ ಕಮ್ಯುನಿಸ್ಟ್ ಆದವನು ಭಾರತೀಯನಾಗಿರಬಹುದು, ಐರೋಪ್ಯನಾಗಿರಬಹುದು, ಆಫ್ರಿಕಾದವನಾಗಿರಬಹುದು. ಅವನ ಪಿತೃಭೂಮಿ ರಷ್ಯವೇ ವಿನಾ, ಅವನು ಹುಟ್ಟಿ ಬೆಳೆದ ದೇಶವಲ್ಲ, ಕಮ್ಯುನಿಸಂ ಮತ್ತು ರಷ್ಯಾಗಳ ಉತ್ಕರ್ಷಕ್ಕಾಗಿ ಪ್ರತಿಯೊಬ್ಬ ಕಮ್ಯುನಿಸ್ಟನೂ ತನ್ನ ಮಾತೃಭೂಮಿಯನ್ನು ಬಲಿದಾನವನ್ನು ಅರ್ಪಿಸಲು ಸಿದ್ಧವಾಗಿರಬೇಕು ಎನ್ನುವುದೇ ಇನ್ನೊಂದು ವಾದ – ಇದರ ಪುರಸ್ಕರ್ತರು ಅಜಯ ಘೋಷ್, ಪಿ ಸುಂದರಯ್ಯ, ಎ. ಕೆ. ಗೋಪಾಲನ್.

ಮೊದಲೇ ಕಾಂಗ್ರೆಸ್ಸಿನ ಬಗ್ಗೆ ಅತೃಪ್ತಿ ತಳೆದಿದ್ದ ಸಂಬಂಧಂ ಸಹಜವಾಗಿ ಅಜಯ್ ಘೋಷನ ಗುಂಪು ಸೇರಿದ ಮಾಸ್ಕೋ ಮೇಡೇ (May Day) ಉತ್ಸವಕ್ಕೆ ಸಂಬಂಧಂ ಹೋಗಿ ಬಂದ ಮೇಲಂತೂ ರಷ್ಯಾದ ಬಗ್ಗೆ ಅವನ ಭಕ್ತಿ ಪ್ರೇಮ ನೂರ್ಮಡಿಸಿತು.

ವಿದ್ಯಾರ್ಥಿಗಳು, ರೈತರು, ಕೂಲಿಗಾರರು, ಮಧ್ಯಮ ವರ್ಗದವರು, ಸಾಹಿತಿಗಳು, ಕಲಾವಿದರನ್ನು ವಿವಿಧ ಸಂಘ ಸಂಸ್ಥೆಗಳ ಹೆಸರಿನಲ್ಲಿ ಸಂಬಂಧಂ ಕಮ್ಯುನಿಸ್ಟ್ ಪಾರ್ಟಿಯ ದಾಸಾನುದಾಸರನ್ನಾಗಿ ಮಾಡಿದ್ದ. ಅವನ ವಾಕ್ಯ ಮಹಾ ವಾಕ್ಯ; ಅವನ ಆಜ್ಞೆ ಸುಗ್ರೀವಾಜ್ಞೆ!

ಪಾರ್ಟಿಯಲ್ಲಾಗಲಿ, ಹೊರಗಾಗಲಿ ಅವನನ್ನು ಪ್ರತಿಭಟಿಸಿ ಬದುಕಲು ಯಾರಿಗೂ ಸಾಧ್ಯವಿರಲಿಲ್ಲ, ಸಂಬಂಧಂ ಸಹಪಾಠಿಯಾಗಿದ್ದ ವಾಸನ್, ಪಾರ್ಟಿಯಿಂದ ಆಕರ್ಷಿತನಾಗಿ ಪುರೋಗಾಮಿ ಲೇಖಕರ ಸಂಘ, ಜನತಾ ಕಲಾವಿದರು (People's artists) ಸಂಸ್ಥೆಗಳನ್ನು ಕಟ್ಟಲು, ಸಂಬಂಧಂಗೆ ಸಹಾಯಕನಾದ.

ಜನತಾ ಕಲಾವಿದರು (People's artists) ಸಂಸ್ಥೆಯ ಆಡಳಿತ ನಿರ್ವಹಣೆ ವಾಸನ್‌ಗೆ ಸೇರಿದ್ದರೂ, ಅದರ ಕಲಾ ವಿಭಾಗವನ್ನು ನೋಡಿಕೊಳ್ಳುತ್ತಿದ್ದವನು ಧೀರಾಲಾಲ್.

ಲಕ್ನೌ ವಾಸಿಯಾದ ಧೀರಾಲಾಲ್ ಪ್ರಾಚೀನ ಕಥಕ ಸಂಪ್ರದಾಯದ ನಟುವರರ ಮನೆಗೆ ಸೇರಿದವನು. ಅವನ ತಂದೆ ಮೋತೀಲಾಲ್ ಕಾಲವಶವಾಗಲು, ಚಿಕ್ಕಪ್ಪ ಹೀರಾಲಾಲನ ದೌರ್ಜನ್ಯ ಸಹಿಸಲಾಗದೆ ದಿಲ್ಲಿ ಸೇರಿದ. ದಿಲ್ಲಿಯಲ್ಲಿ ಅವನಿಗೆ ಸಾಕಷ್ಟು ಪ್ರೋತ್ಸಾಹ ಸಿಕ್ಕದಿರಲು, ಮದರಾಸಿಗೆ

ಬಂದ ಧೀರಾಲಾಲ್ ಒಂದು ಫಿಲ್ಮ್ ಕಂಪೆನಿ ಸೇರಿಕೊಂಡು, ನಟನಟಿಯರಿಗೆ ಕಥಕ್ ನೃತ್ಯ ಶಿಕ್ಷಣ ಕೊಡಲಾರಂಭಿಸಿದ. ಈ ಸಮಯದಲ್ಲೇ ಅವನಿಗೆ ಸಂಬಂಧಂ ಪರಿಚಯವಾದುದು.

ಫಿಲಂ ವ್ಯವಹಾರವೂ ಲಾಭದಾಯಕವಾಗದೆ ಧೀರಾಲಾಲ್ ಬೀದಿ ಬೀದಿ ಅಲೆಯುತ್ತಿದ್ದುದನ್ನು ಕಂಡ ಸಂಬಂಧಂ, ಅವನಿಗೆ ಆಶ್ರಯವಿತ್ತು 'ಪೀಪಲ್ಸ್ ಆರ್ಟಿಸ್ಟ್' (People's artists) ಸಂಸ್ಥೆಯನ್ನು ಸ್ಥಾಪಿಸಿದ. ಪಾರ್ಟಿಯೇ ಪರೋಕ್ಷವಾಗಿ ಧೀರಾಲಾಲನ ಖರ್ಚು ವೆಚ್ಚಗಳನ್ನು ಪೂರೈಸುತ್ತಿತ್ತು.

ಧೀರಾಲಾಲ್ ಮೈಲಾಪುರದಲ್ಲಿ ಒಂದು ಮನೆ ಬಾಡಿಗೆಗೆ ತೆಗೆದುಕೊಂಡು ಕಥಕ್ ನೃತ್ಯ ಶಿಕ್ಷಣಶಾಲೆಯನ್ನಾರಂಭಿಸಿದ. ಆಗಾಗ್ಗೆ ಅವನೂ ಅವನ ಶಿಷ್ಯ ಶಿಷ್ಯೆಯರೂ ಪ್ರದರ್ಶನಗಳನ್ನು ಕೊಡುತ್ತಿದ್ದರು.

ಒಂದು ದಿನ, ವಾಸನ್ ಜತೆಯಲ್ಲಿ ನೃತ್ಯಶಾಲೆಗೆ ಬಂದ ಸಂಬಂಧಂ,

"ಇನ್ನು ಮೇಲೆ ಪಾರ್ಟಿಯ ಹಣ ಕೊಟ್ಟು ನಿನ್ನ ಸಂಸ್ಥೆ ನಡಸುವುದಕ್ಕಾಗುವುದಿಲ್ಲ ಧೀರಾಲಾಲ್" ಎಂದ.

ಧೀರಾಲಾಲನ ಜಂಘಾಬಲವೇ ಉಡುಗಿಹೋಯಿತು. ಅವನು ಅತಿ ದೈನ್ಯತೆಯಿಂದ,

"ನನ್ನ ಗತಿಯೇನು ಸಾರ್" ಎಂದು ಕೇಳಿದ.

"ವಿದ್ಯಾರ್ಥಿಗಳಿಂದ ನೀನು ತೆಗೆದುಕೊಳ್ಳುವ ಫೀಸು, ಪ್ರದರ್ಶನಗಳಿಂದ ಬರುವ ವರಮಾನದಿಂದ ನೀನು ಸಂಸ್ಥೆ ನಡೆಸಬೇಕು. ಇನ್ನು ಮೇಲೆ ಪಾರ್ಟಿ ಫಂಡಿಗೆ ನೀನು ಹಣ ಕೊಡುತ್ತ ಬರಬೇಕು."

"ನನ್ನ ಆದಾಯ, ವೆಚ್ಚ ಎಷ್ಟೆನ್ನುವುದು ನಿಮಗೆ ತಿಳಿದೇ ಇದೆ."

"ಪಾರ್ಟಿಯ ಮುಖ್ಯಗೆಲಸ ರಾಜಕೀಯ. ಸಾಹಿತ್ಯ, ಕಲೆ ಇವುಗಳು ನಮಗೆ ಗೌಣ. ಪಾರ್ಟಿಯ ಹಣ ರಾಜಕೀಯಕ್ಕೆ ಮೀಸಲಾಗಬೇಕು."

ಮಧ್ಯೆ ಬಾಯಿ ಹಾಕಿದ ವಾಸನ್,

"ಈಗ ಪಾರ್ಟಿಗೂ ಹಣ ಬೇಕು. ಧೀರಾಲಾಲನ ಶಾಲೆಗೂ ಹಣ ಬೇಕು ಸಂಬಂಧಂ. ಧೀರಾಲಾಲ್ ಮತ್ತು ಇನ್ನೂ ಕೆಲವು ಕಲಾವಿದರನು ಸೇರಿಸಿ ನಾವು ಒಂದು ಪ್ರದರ್ಶನ ಏರ್ಪಡಿಸೋಣ. ಪಾರ್ಟಿ ಯೂನಿಟ್‌ಗಳೆಲ್ಲಾ (unit) ಟಿಕೆಟ್ ಮಾರಿದರೆ ಒಂದು ಲಕ್ಷ ರೂಪಾಯಿ

ನಾವು ಸಂಗ್ರಹಿಸಬಹುದು. ಇದರಲ್ಲಿ ಒಂದು ಭಾಗ ಧೀರಾಲಾಲನ ಶಾಲೆಗಿತ್ತು, ಉಳಿದುದನ್ನು ನಾವು ಪಾರ್ಟಿ ಫಂಡಿಗೆ ಸೇರಿಸಬಹುದು.

ಕಾರ್ಮೋಡ ಕವಿದಿದ್ದ ಆಕಾಶದಲ್ಲಿ ಬೆಳ್ಳಿಯ ಮಿಂಚು ಸುಳಿದಂತಾಯಿತು. ಧೀರಾಲಾಲ್ ಹುರುಪುಗೊಂಡು,

"ಹೌದು ಸಾರ್, ವಾಸನ್‌ರವರ ಸಲಹೆ ಬಹಳ ಚೆನ್ನಾಗಿದೆ. ನಾಲ್ಕಾರು ಒಳ್ಳೆಯ ಕಲಾವಿದರನ್ನು ಕೂಡಿಸಿ ನಾವು ಪ್ರದರ್ಶನವಿತ್ತರೆ ಸಾಕಷ್ಟು ಹಣ ಸಂಗ್ರಹಿಸಬಹುದು."

"ಒಳ್ಳೆಯದು - ಪ್ರೋಗ್ರಾಂ ಹಾಕು ವಾಸನ್."

ವಾಸನ್ ಕೈಗೆ ಕಾಗದ, ಪೆನ್ ತೆಗೆದುಕೊಂಡು,

"ನಮ್ಮ ಈ ಪ್ರದರ್ಶನ ಭಾರತದ ವಿವಿಧ ನೃತ್ಯ ಸಂಪ್ರದಾಯಗಳ ಪ್ರದರ್ಶನವಾಗಲಿ. ಧೀರಾಲಾಲ್ ಮತ್ತು ಅವನ ಶಿಷ್ಯ ಶಿಷ್ಯೆಯರು ಕಥಕ್ ನೃತ್ಯ ಪ್ರದರ್ಶಿಸಲಿ."

"ಆಗಬಹುದು - ಕಥಾಕಳಿಗೆ ಯಾರು?"

"ಕುಂಜುಕುರೂಪ್."

"ಅವನು ಹಣ ಕೇಳುತ್ತಾನೆ - ನಾವು ಯಾರಿಗೂ ಹಣ ಕೊಡುವುದಿಲ್ಲ."

"ಕುಂಜುಕುರೂಪನನ್ನು ನಾನು ಒಪ್ಪಿಸುತ್ತೇನೆ."

"ಸರಿ - ಮಣಿಪೂರಿಗೆ....?"

"ಸ್ನೇಹಮಾಲಿನಿ."

"ಅವಳು ಪಾರ್ಟಿ ಸಿಂಪತೈಜರ್ (Sympathizer) - ಒಪ್ಪುತ್ತಾಳೆ – ಭರತನಾಟ್ಯಕ್ಕೆ ?"

"ನನ್ನ ತಂಗಿ ಕಲಾವತಿ, ಅವಳ ಸಹಪಾಠಿ ಮೋಹಿನಿ."

"ಮೋಹಿನಿ ಯಾರು ?"

"ಮೈಸೂರ್ ಹುಡುಗಿ - ಅಡೆಯಾರಿನಲ್ಲಿ ಭರತನಾಟ್ಯ ಕಲಿಯುತ್ತಿದ್ದಾಳೆ."

"ಹೇಗೆ – ಪರವಾಗಿಲ್ಲವೋ?"

"ಅಡೆಯಾರಿನ ವಿದ್ಯಾರ್ಥಿನಿಯರಲ್ಲಿ ಅವಳೇ ಶ್ರೇಷ್ಠಳೆಂದು ಕಲಾವತಿ ಹೇಳುತ್ತಿರುತ್ತಾಳೆ."

"ಪ್ರೋಗ್ರಾಂ ನಿರ್ಧರವಾದಹಾಗಾಯಿತು. ನೀನು ನಾಳೆಯಿಂದಲೇ ರಿಹರ್ಸಲ್ ಆರಂಭಿಸು ಧೀರಾಲಾಲ್."

"ಒಳ್ಳೆಯದು ಸಾರ್."

“ಈ ಪ್ರದರ್ಶನ ಯಶಸ್ವಿಯಾಗಿ, ಪಾರ್ಟಿ ಬೊಕ್ಕಸ ತುಂಬಿದರೆ, ಪ್ರದರ್ಶನದಲ್ಲಿ ಭಾಗವಹಿಸಿದವರೆಲ್ಲರನ್ನೂ ನಾನು ರಷ್ಯಾಕ್ಕೆ ಕಳಿಸಿಕೊಡುತ್ತೇನೆ. ಯಾರಿಗೂ ಸಂಭಾವನೆ ಕೊಡುವುದಿಲ್ಲ ಎನ್ನುವ ಅಂಶ ಸ್ಪಷ್ಟಪಡಿಸಿ ಬಿಡು.”

“ಹೇಳುತ್ತೇನೆ ಸಾರ್”

ಎಂದು ಧೀರಾಲಾಲ್ ಒಪ್ಪಿಕೊಂಡ.

ಕೀಳುಪಾಕಿನ (Kilpauk) ವಿಶಾಲ ಆವರಣದಲ್ಲಿ, ತಾತ್ಕಾಲಿಕ ನಾಟ್ಯ ಗೃಹ ನಿರ್ಮಾಣ ಮಾಡಿ ಪ್ರದರ್ಶನ ಏರ್ಪಡಿಸಲಾಯಿತು ಕಮ್ಯುನಿಸ್ಟರ ಲಾಂಛನವಾದ 'ಸುತ್ತಿ, ಕುಡುಗೋಲಿನ (Sickle and hammer)' ಸಹಸ್ರಾರು ಬಾವುಟಗಳು ಮೆರೆದಾಡಿದವು. ಎಲ್ಲೆಡೆಗಳಲ್ಲಿಯೂ ಕಮ್ಯುನಿಸ್ಟರ ಘೋಷಣೆಗಳು ವಿಜೃಂಭಿಸುತ್ತಿದ್ದವು.

(೧) ಜಗತ್ತಿನ ಶ್ರಮಜೀವಿಗಳೇ, ಒಂದಾಗಿರಿ !

"Proletarians of the world, unite !

(೨) ವಿಶ್ವರಾಜ್ಯ ಬೆಳವಳಿಗೆಗೆ ಸೋಷಿಯಲಿಸ್ಟ್ ಸೋವಿಯಟ್ ರಿಪಬ್ಲಿಕ್ಕುಗಳ ಯೂನಿಯನ್ ಮೂಲಾಧಾರವಾಗಿದೆ.

"The Union of Socialist Soviet Republics is the Kernel for the future Growth of a World State"

(೩) ನಮ್ಮ ಶಕ್ತಿಯಿರುವುದು ಸಮಷ್ಠಿಯನ್ನು ಬಲಗೊಳಿಸುವುದರಲ್ಲಿ !

"Our Power is in the fight welding of the collective"

(೪) ಶ್ರಮಜೀವಿಗಳ ಸರ್ವಾಧಿಕಾರ ಚಿರಾಯುವಾಗಿರಲಿ ! ಯಾರು ನಮ್ಮೊಂದಿಗಿಲ್ಲವೋ ಅವರು ನಮ್ಮ ವಿರೋಧಿಗಳು!

"Long live the dictatorship of the proletariat Who is not with us – is against us"

(೫) ಮಾನವ ಸ್ವಾತಂತ್ರ್ಯಕ್ಕಾಗಿ ಕಮ್ಯುನಿಸ್ಟ್ ಪಾರ್ಟಿ ನಡಸುತ್ತಿರುವ ಸಮರದಲ್ಲಿ ಯಾರನ್ನೂ ಉಳಿಸುವುದಿಲ್ಲ.

"The Communist Party spares no Victims in its fight for the freedom of mankind"

(೬) ಕಮ್ಯುನಿಸ್ಟ್ ಪಾರ್ಟಿಯ ಬಾವುಟದಡಿಯಲ್ಲಿ ವರ್ಗಬಾಂಧವ್ಯವನ್ನು ಭದ್ರಪಡಿಸಿ

"Tighten the bonds of class solidarity under the standard of the Communist Party"

ಆವರಣ ತುಂಬಿ ತುಳುಕಾಡುವಷ್ಟು ಜನಸಂದಣಿ.

ಸಂಜೆ ಆರರವಳೆಗೆ ಸರಿಯಾಗಿ ನಾಟ್ಯಪ್ರದರ್ಶನ ಸ್ನೇಹಮಾಲಿನಿಯ ಮಣಿಪೂರಿ ನೃತ್ಯದಿಂದ ಆರಂಭವಾಯಿತು. ನಾಟ್ಯಪೂರ್ವ ವಾಸನ್ ನರ್ತಕಿ, ಅವಳ ಸಂಪ್ರದಾಯದ ಪರಿಚಯ ಮಾಡಿಕೊಟ್ಟ. ತರುವಾಯ ಕುಂಜು ಕುರೂಪ್ ಮತ್ತು ಸಂಗಡಿಗರು 'ದೈವಾಸುರ ಕಾಳೆಗ'ದ ಒಂದು ದೃಶ್ಯವನ್ನು ಕಥಾಕಲಿ ಸಂಪ್ರದಾಯಕ್ಕನುಗುಣವಾಗಿ ಅಭಿನಯಿಸಿದರು.

ವಿರಾಮಾನಂತರ ಧೀರಾಲಾಲ್ ಮತ್ತು ಸಂಗಡಿಗರು ಕಥಕ್ ನೃತ್ಯ ಪ್ರದರ್ಶಿಸಿದರು.

ಕೊನೆಯದಾಗಿ ಕಲಾ ಮತ್ತು ಮೋಹಿನಿ ಭರತನಾಟ್ಯ ಸಂಪ್ರದಾಯದಲ್ಲಿ ಸ್ವರಜತಿ, ಜಾವಳಿ, ತಿಲ್ಲಾನ, ಪದ ಅಭಿನಯಿಸಿದಾನಂತರ ಅಂದಿನ ಕಾರ್ಯಕ್ರಮ ಕೊನೆಗಂಡಿತು.

ಕಲಾದೃಷ್ಟಿಯಲ್ಲಿ ಹಾಗೂ ವರಮಾನ ದೃಷ್ಟಿಯಲ್ಲಿ ಪ್ರದರ್ಶನ ಪೂರ್ಣವಾಗಿ ಯಶಸ್ವಿಯಾದುದಕ್ಕೆ ಸಂಬಂಧಂಗೆ ಪರಮಾನಂದವಾಗಿತ್ತು.

ಯಾರಿಗೂ ತನ್ನ ಅಂತರಂಗದ ಭಾವನೆಗಳನ್ನು ತೋರಗೊಡದ ಉಗ್ರಮೂರ್ತಿ ಸಂಬಂಧಂ ನೇಪಥ್ಯದೊಳಗೆ ಬಂದು, ಕಲಾವಿದರನ್ನು ಅಭಿನಂದಿಸಿದ.

ಧೀರಾಲಾಲನಿಗೆ ಸ್ವರ್ಗ ಗೇಣು ದೂರದಲ್ಲಿ ಉಳಿಯಿತು.

ಪರಮ ಹರ್ಷಗೊಂಡ ಧೀರಾಲಾಲ್ ಕಲಾವತಿ, ಮೋಹಿನಿ ಇದ್ದಲ್ಲಿಗೆ ಬಂದು,

"ಸಂಬಂಧಂ ಹೇಳಿದುದನ್ನು ಕೇಳಿದಿರಾ?" ಎಂದ.

"ಕೇಳಿದೆವು."

"ಮುಕ್ತಕಂಠದಿಂದ ಅವರು ಯಾರನ್ನಾದರೂ ಹೊಗಳಿದುದು ಇದೇ ಮೊದಲು."

ಕಲಾವತಿ ನಸುನಕ್ಕು,

"ನಾನು ಬಟ್ಟೆ ಬದಲಿಸುತ್ತೇನೆ ಮೋಹಿನಿ"

ಎಂದು ಹೋದಳು.

ಧೀರಾಲಾಲ್ ಪಿಸುದನಿಯಲ್ಲಿ,

"ಮೋಹಿನಿದೇವಿ...." ಎಂದ.

"ಏನು ಧೀರಾಲಾಲ್‌ಜೀ."

"ನಾಟ್ಯ ರಂಗದಲ್ಲಿ ನಿಮಗೆ ಉಜ್ಜ್ವಲ ಭವಿಷ್ಯವಿದೆ."

ನಸುನಾಚಿದ ಮೋಹಿನಿ, ವಿನಯದಿಂದ,

"ಥ್ಯಾಂಕ್ಸ್" ಎಂದಳು.

"ನೀವು ಕಥಕ್, ಮಣಿಪೂರಿ ಸಂಪ್ರದಾಯಗಳನ್ನೂ ರೂಢಿಸಿಕೊಳ್ಳುವುದು ಒಳ್ಳೆಯದು."

"ನನಗೂ ಆ ವಿಚಾರ ಹೊಳೆಯಿತು. ಒಂದಕ್ಕಿಂತ ಹೆಚ್ಚು ಸಂಪ್ರದಾಯಗಳನ್ನು ಕಲಿತರೆ ಎಲ್ಲವೂ ಕಲಬೆರಿಕೆಯಾಗುತ್ತದೆ ಎಂದು ಕಲಾವತಿ ಹೇಳಿದರು - ಅದಕ್ಕೋಸ್ಕರ ಸುಮ್ಮನಾದೆ."

"ಹಾಗೇನಿಲ್ಲ ನೀವು ನಾಳೆ ಶಾಲೆಗೆ ಬನ್ನಿ - ಎಲ್ಲಾ ಮಾತನಾಡುವ."

"ಆಗಲಿ - ಸಂಜೆ ಆರಕ್ಕೇ ಬರುತ್ತೇನೆ" ಎಂದಳು.

ಸಂಜೆ ಆರಕ್ಕೆ ಸರಿಯಾಗಿ ನೃತ್ಯ ಶಾಲೆಗೆ ಬಂದ ಮೋಹಿನಿಯನ್ನು ಧೀರಾಲಾಲ್ ಆದರದಿಂದ ಸ್ವಾಗತಿಸಿದ.

"ಇವತ್ತು ಕ್ಲಾಸುಗಳಿಲ್ಲವೇ ಧೀರಾಲಾಲ್‌ಜಿ" ಎಂದು ಕೇಳಿದಳು.

"ಇಲ್ಲ. ಇವತ್ತು ಸೂಟಿ ಕೊಟ್ಟಿದ್ದೇನೆ."

ಕಥಕ್ ಮತ್ತು ಭರತನಾಟ್ಯ ಸಂಪ್ರದಾಯಗಳಿಗಿದ್ದ ಭಿನ್ನತೆಯನ್ನು ವಿವರಿಸಿದ ಧೀರಾಲಾಲ್,

"ನಿಮ್ಮ ಭರತನಾಟ್ಯಕ್ಕೆ ಯಾವ ತೊಂದರೆಯೂ ಆಗದಂತೆ ನಾನು ಕಥಕ್ ಕಲಿಸಿಕೊಡುತ್ತೇನೆ – ಕಲಿಯಿರಿ."

"ಅಗಲಿ ಈ ವಿಷಯ ಕಲಾವತಿಗೆ ಗೊತ್ತಾಗಬಾರದು."

"ಏಕೆ ?"

"ಆಕೆ ಶುದ್ಧ ನಾಟ್ಯವಾದಿ. ವಿವಿಧ ಸಂಪ್ರದಾಯಗಳನ್ನು ಕಲಿಯುವುದನ್ನು ಅವಳು ವಿರೋಧಿಸುತ್ತಾಳೆ."

"ನೀವು ಕಥಕ್ ನಾಟ್ಯ ಕಲಿಯಬೇಕೆಂದು ನಾನು ಸೂಚಿಸುವುದಕ್ಕೆ ಇನ್ನೂ ಒಂದು ಪ್ರಬಲ ಕಾರಣವಿದೆ."

"ಏನದು ?"

"ಈ ವರ್ಷದ ಮೇಡೇ (Mayday) ಉತ್ಸವಕ್ಕೆ ಇಲ್ಲಿಂದ ಕಲಾವಿದರ ತಂಡವೊಂದನ್ನು ರಷ್ಯಾಕ್ಕೆ ಕಳಿಸಲು ಸಂಬಂಧಂ ಯೋಚಿಸುತ್ತಿದ್ದಾರೆ."

"ಯಾರು ಯಾರಿಗೆ ಆಮಂತ್ರಣ ಕೊಡುತ್ತಾರೆ."

"ನಾನೇ ತಂಡದ ನಾಯಕ ಕುಂಜುಕುರೂಪ್, ಸ್ನೇಹಮಾಲಿನಿ, ನೀವು ಬರಬೇಕಾಗುತ್ತದೆ."

"ಕಲಾವತಿ ?"

"ಕಲಾವತಿ ಬೇಡವೆಂದು ನಾನೇ ಹೇಳಿದೆ."

"ಏಕೆ ಹಾಗೆ ಮಾಡಿದಿರಿ ?"

"ನಿಮಗಾಗಿ."

"ನನಗಾಗಿ !"

"ಹೌದು - ಕೇಳಿ - ನೀವು, ಕಲಾವತಿ ಸಮಾನ ಪ್ರತಿಭೆಯುಳ್ಳ ಕಲಾವಿದೆಯರು. ಅವರೂ ರಷ್ಯಾಕ್ಕೆ ಬಂದರೆ ನಿಮ್ಮ ಕೀರ್ತಿಯ ಅರ್ಧ ಪಾಲು ಅವರಿಗೆ ಸೇರಬೇಕಾಗುತ್ತದೆ. ಭಾರತದ ಏಕಮೇವಾವದ್ವಿತೀಯ ನರ್ತಕಿ ಎಂಬ ಹೆಸರು ನಿಮಗೇ ಬರಬೇಕೆಂದು ನನ್ನ ಆಸೆ."

ತನ್ನ ಬಗ್ಗೆ ಧೀರಾಲಾಲ್ ಅವ್ಯಾಜ ಅಂತಃಕರಣ ತಳಿದಿದ್ದುದರ ರಹಸ್ಯ ಮೋಹಿನಿಗೆ ಅರ್ಥವಾಗಲಿಲ್ಲ. ಅವಳ ಸಂಶಯಗ್ರಸ್ತತೆ ಕಂಡ ಧೀರಾಲಾಲ್

"ನಾನು ಹೇಳಿದ ಮಾತು ಕೇಳಿ ನಿಮಗೆ ಆಶ್ಚರ್ಯವಾಗಿರಬಹುದು...."

"ಖಂಡಿತವಾಗಿ..."

"ಕಲಾವತೀಗೂ ನಿಮಗೂ ಒಂದು ದೊಡ್ಡ ವ್ಯತ್ಯಾಸವಿದೆ. ಅವರು ಭರತನಾಟ್ಯ ಚೆನ್ನಾಗಿ ಕಲಿತಿದ್ದಾರೆ - ಚೆನ್ನಾಗಿ ಅಭಿನಯಿಸುತ್ತಾರೆ. ಆದರೆ ಅವರದ್ದು ಕಲಿಕೆಯ ಪಾಠ - ಕಲಿತದ್ದನ್ನು ಗಿಣಿ ಪಾಠದಂತೆ ಒಪ್ಪಿಸುತ್ತಾರೆ. ಅದಕ್ಕೇ ಅವರು ಹೊಸ ಸಂಪ್ರದಾಯಗಳ ಬಗ್ಗೆ ವಿರೋಧ ತಳೆದಿರುವುದು - ನಿಮ್ಮಲ್ಲಿ ಕ್ರಿಯಾಶಾಲಿತ್ವ ಇದೆ. ಕಲಿತುದರ ಜತೆಗೆ, ನಿಮ್ಮ ಸ್ವಯಂಪ್ರತಿಭೆಯನ್ನೂ ಬೆರಸಿ ಅಪೂರ್ವ ಕಲಾಪಾಕ ಸಿದ್ಧಗೊಳಿಸಬಲ್ಲಿರಿ."

"ರಷ್ಯಾಗೆ ನಾವು ಮೇ ತಿಂಗಳಲ್ಲಿ ಹೊರಡುವುದಾದರೆ ಇನ್ನು ಮೂರೇ ತಿಂಗಳು ಉಳಿದಿರುವುದು"

"ಹೌದು."

"ಮೂರು ತಿಂಗಳಲ್ಲಿ ನಾನು ಕಥಕ್ ಕಲಿತು ನಿಮ್ಮ ಜತೆ ನರ್ತಿಸಬಲ್ಲೆನೇ?"

"ಅದು ನನಗಿರಲಿ ಮೋಹಿನಿ."

“ನಾನಂತೂ ಶ್ರದ್ಧಾಭಕ್ತಿಪೂರ್ವಕವಾಗಿ ಕಲಿಯುತ್ತೇನೆಂದು ನಿಮಗೆ ಆಶ್ವಾಸನ ಕೊಡಬಲ್ಲೆ.”

“ಅಷ್ಟೇ ನನಗೆ ಬೇಕಾಗಿರುವುದು - ಸಂಬಂಧಂ ಅವರು ನಮ್ಮ ಕೈ ಹಿಡಿದಿರುವುದು ನಮ್ಮ ಪುಣ್ಯ ವಿಶೇಷ.”

“ಅವರು ಮಹಾ ಪ್ರಬಲರೆಂದು ಕೇಳಿದ್ದೇನೆ.”

“ಪ್ರಬಲರು ಎಂದು ಹೇಳುವಿರಾ? - ಅವರ ಹೆಸರೇ ಸ್ಟಾಲಿನ್ ಸಂಬಂಧಂ ಎಂದು. ಸಂಬಂಧಂ ಮನಸ್ಸು ಮಾಡಿದರೆ ನಿಮ್ಮನ್ನು ಅಂತರ - ರಾಷ್ಟ್ರೀಯ ವ್ಯಕ್ತಿಗಳನ್ನಾಗಿ ಮಾಡಬಲ್ಲರು. ರಷ್ಯಾದ ಮಹಾ ನಾಯಕರಿಗೆ ಸಂಬಂಧಂ ಮಾತಿನಲ್ಲಿ ಪೂರ್ಣ ವಿಶ್ವಾಸವಿದೆ. ಅವರ ಭಾವನೆ, ವಿಚಾರ, ಯೋಚನೆಗಳು ಅನ್ಯಾದೃಶ. ನಾಳೆ ಸಂಜೆ ಇಲ್ಲಿಗೆ ಬನ್ನಿ - ನಾನು ಸಣ್ಣದಾಗಿ ಒಂದು ಟೀಪಾರ್ಟಿ ಇಟ್ಟುಕೊಂಡಿದ್ದೇನೆ. ಸಂಬಂಧಂ ಬರುತ್ತಾರೆ. ಪ್ರವಾಸದ ವಿಷಯ ಅವರೊಂದಿಗೆ ಖಚಿತವಾಗಿ ಮಾತನಾಡಿಬಿಡೋಣ.”

ಆನಂದಪರವಶಳಾದ ಮೋಹಿನಿ,

“ಬರುತ್ತೇನೆ”

ಎಂದು ಹೇಳಿದಳು.

# ೨೩

ತನ್ನ ನೃತ್ಯಶಿಕ್ಷಣಶಾಲೆಯಲ್ಲಿ 'ಟೀಪಾರ್ಟಿ' ವ್ಯವಸ್ಥೆ ಮಾಡಿದ ಧೀರಾಲಾಲ್, ಅತಿಥಿಗಳನ್ನು ನಿರೀಕ್ಷಿಸುತ್ತ ನಿಂತ.

ಆರು ಗಂಟೆಗೆ ಸರಿಯಾಗಿ ಬಂದ ಮೋಹಿನಿ,

"ಇನ್ನೂ ಯಾರೂ ಬಂದಿಲ್ಲವೇ ?" ಎಂದಳು.

"ನಾನು ಹೆಚ್ಚು ಜನರನ್ನು ಕರೆದಿಲ್ಲ. ಸಂಬಂಧಂ ಒಬ್ಬರು ಬಂದರಾಯಿತು - ನಿಮಗೊಂದು ಸೂಚನೆ ಕೊಡುತ್ತೇನೆ ಮೋಹಿನಿದೇವಿ, ಮನಸ್ಸಿಗೆ ಬೇಸರ ಮಾಡಿಕೊಳ್ಳಬೇಡಿ."

"ಇಲ್ಲ ಹೇಳಿ ಧೀರಾಲಾಲ್."

"ಸಂಬಂಧಂ ಜತೆ ನೀವು ಮಾತನಾಡುವಾಗ ಬಹಳ ಎಚ್ಚರದಿಂದಿರಬೇಕು. ಅಡ್ಡಮಾತು ಆಡಬೇಡಿ ಅವರ ಮನಸ್ಸಿನಲ್ಲಿ ಕಿನಿಸು ಉಳಿದು ಬಿಟ್ಟರೆ ಬಹಳ ಕಷ್ಟ."

"ಇದೇನ್ರೀ - ಸಂಬಂಧಂ ಅವರನ್ನು ಕಂಡರೆ ನೀವೆಲ್ಲಾ ಹೀಗೆ ನಡಗುತ್ತೀರಿ."

"ಸಂದರ್ಭ ಹಾಗಿದೆ ಮೋಹಿನಿದೇವಿ - ಅವರು ಒಲಿದರೆ ನಾರಿ, ಮುನಿದರೆ ಮಾರಿ."

"ಗಂಡುಮಾರಿ ಎನ್ನಿ"

ಎಂದು ನಕ್ಕಳು.

ಮೆಲ್ಲನೆ ನೃತ್ಯಶಾಲೆ ಪ್ರವೇಶಿಸಿದ ಸಂಬಂಧಂ,

"ಇದೇನೂ ಬಹಳ ನಗುತ್ತಿದ್ದೀರಿ. ವಿಷಯ ತಿಳಿಸಿ - ನಾನೂ ನಕ್ಕು ಸಂತೋಷ ಪಡುತ್ತೇನೆ."

"ಏನೂ ಇಲ್ಲ - ನಿಮ್ಮ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ವರ್ತಿಸಬೇಕೆಂದು ಧೀರಾಲಾಲ್ ಹೇಳುತ್ತಿದ್ದರು - ನಗು ಬಂದಿತು."

"ಅಷ್ಟೇ ತಾನೆ !"

ಧೀರಾಲಾಲ್ ಇಬ್ಬರ ಕೈಗೂ ತಿಂಡಿ ತಿನಿಸುಗಳ ಪ್ಲೇಟುಗಳನ್ನಿತ್ತ.

ಪ್ಲೇಟಿನಲ್ಲಿದ್ದ ಜಹಾಂಗೀರ್ ಸವಿಯುತ್ತ ಮೋಹಿನಿ,

"ನಿಮ್ಮ ಪಾರ್ಟಿಯನ್ನು ಕಂಡರೆ ಜನರೇಕೆ ಹೆದರುತ್ತಾರೆ ಮಿ. ಸಂಬಂಧಂ?" ಎಂದು ಕೇಳಿದಳು.

"ನೀನು ಕಾರ್ಲ್‌ಮಾರ್ಕ್ಸ್‌ರ ದಸ್ ಕ್ಯಾಪಿಟಲ್ (Das Capital) ಗ್ರಂಥವನ್ನು ಓದಿದ್ದೀಯಾ ಮೋಹಿನಿ ?"

"ಓದಲು ಪ್ರಯತ್ನಿಸಿದೆ - ಸ್ವಲ್ಪವೂ ಅರ್ಥವಾಗಲಿಲ್ಲ."

"ಯಾರಿಗೂ ಅರ್ಥವಾಗಿಲ್ಲ - ಅದು ಬೇರೆ ವಿಷಯ, ಮಾರ್ಕ್ಸ್ - ಲೆನಿನ್ ಅನುಯಾಯಿಗಳಾದ ನಾವು ಮಾರ್ಕ್ಸ್ - ಲೆನಿನ್ ವಾದವನ್ನು ಒಪ್ಪಿಕೊಳ್ಳದಿರುವ ಎಲ್ಲರನ್ನೂ ಪರಮ ಶತಶ್ರುಗಳೆಂದು ಭಾವಿಸುತ್ತೇವೆ. ಅದಕ್ಕೇ ಮಾರ್ಕ್ಸ್ - ಲೆನಿನ್ ವಾದ ವಿರೋಧಿಗಳಿಗೆ ನಮ್ಮನ್ನು ಕಂಡರೆ ಭಯ."

"ಮಾರ್ಕ್ಸ್ ಲೆನಿನ್ ವಾದವನ್ನೇ ಎಲ್ಲರೂ ಒಪ್ಪಿಕೊಳ್ಳಬೇಕೆಂದು ನೀವು ಹಟ ಹಿಡಿಯುವುದೇಕೆ ?"

"ಜಗತ್ತಿನಲ್ಲಿ ಇರುವುದು ಎರಡೇ ವರ್ಗ - ಶೋಷಕರು, ಶೋಷಿತರು. (Exploiters & Exploited) - ಉಳ್ಳವರು, ಉಳ್ಳದಿರುವವರು (haves & have nots) - ಈ ಎರಡು ವರ್ಗಗಳಲ್ಲಿ ಮೈತ್ರಿ ಹೇಗೆ ಸಾಧ್ಯ."

"ಉಳ್ಳವರೆಲ್ಲಾ ಶೋಷಕರೇ?"

"ಇನ್ನೇನು. ನಾವೆಲ್ಲರೂ ಆದಿನಿವಾಸಿಗಳಾಗಿದ್ದಾಗ ಸಮಾನಸ್ಕಂಧರಾಗಿರಲಿಲ್ಲವೆ? ಎಲ್ಲರೂ ಒಂದೇ ಬಗೆಯ ನಾರು, ತೊಗಟೆಗಳನ್ನು ಧರಿಸುತ್ತಿರಲ್ಲಿವೇ? ಬೇಟೆಯಿಂದ ದೊರೆತ ಮೃಗ ಪಕ್ಷಿಗಳನ್ನು ಎಲ್ಲರೂ ಸಮವಾಗಿ ಹಂಚಿಕೊಂಡು ಭಕ್ಷಿಸುತ್ತಿರಲಿಲ್ಲವೇ ? ಎಲ್ಲರೂ ಒಂದೇ ಭೂಮಿಯನ್ನು ಹಾಸಿಗೆ ಮಾಡಿಕೊಂಡು, ಆಕಾಶವನ್ನೇ ಹೊದಿಕೆ ಮಾಡಿಕೊಂಡು ಮಲಗುತ್ತಿರಲಿಲ್ಲವೇ? ಕಾಲಾನುಕಾಲಕ್ಕೆ ಈ ಸಮಾನಸ್ಕಂಧತೆ ಅಳಿಯಿತು. ಒಬ್ಬ ನೆಲದ ಮೇಲೆ ಮಲಗುತ್ತಿದ್ದ; ಇನ್ನೊಬ್ಬ ಸುಪ್ಪತ್ತಿಗೆಯ ಮೇಲೆ ಮಲಗುತ್ತಿದ್ದ. ಒಬ್ಬ ಮೃಷ್ಟಾನ್ನ ಭುಜಿಸುತ್ತಿದ್ದ; ಇನ್ನೊಬ್ಬ ಕದನ್ನ ಕಾಣುತ್ತಿದ್ದ. ಸುಪ್ಪತ್ತಿಗೆಯ ಮೇಲೆ ಮಲಗುವವರಿಗೆ ಸುಪ್ಪತ್ತಿಗೆ, ಮೃಷ್ಟಾನ್ನ ಭುಜಿಸುವವರಿಗೆ ಮೃಷ್ಟಾನ್ನ ಎಲ್ಲಿಂದ ಬಂತು? ಮೃಷ್ಟಾನ್ನ ಭೋಕ್ತೃ ಇನ್ನೊಬ್ಬನ ಅನ್ನ ಕಿತ್ತುಕೊಂಡಿದ್ದರಲ್ಲವೇ ಇವನಿಗೆ ಮೃಷ್ಟಾನ್ನಲಭಿಸಿದುದು. ಈ ಅಸಾಮಂಜ್ಯತೆಯನ್ನು ತೊಡೆದು ಹಾಕುವುದಕ್ಕೇ ಕಮ್ಯೂನಿಸ್ಟ್ ಪಾರ್ಟಿ ಹುಟ್ಟಿಕೊಂಡಿರುವುದು."

"ಮಾನವತೆಯಲ್ಲಿ ಸಹಜವಾಗಿ ಬಂದಿರುವ ಗುಣವನ್ನು ನಿಮ್ಮ ಪಾರ್ಟಿ ತೊಡೆದುಹಾಕಬಲ್ಲುದೆಂಬ ನಂಬಿಕೆ ನನಗಿಲ್ಲ."

"ಮಾನವತೆಯ ಸಹಜಗುಣ ಯಾವದು?"

"ಅಸಮಾನಸ್ಕಂದತೆ. ಬುದ್ಧಿಗನುಗುಣವಾಗಿ ವರ್ಗಗಳು ವಿಭಾಗವಾಗುತ್ತವೆ."

"ಅದನ್ನೇ ನಾವು ಬೂರ್ಜ್ವಾ ಫಿಲಾಸಫಿ (Bourgeois philosophy) ಎಂದು ಕರೆಯುವುದು. ನಾವು ಸೃಷ್ಟಿಸುತ್ತಿರುವ ಜಗತ್ತಿನಲ್ಲಿ ಬುದ್ಧಿಗಲ್ಲ ಮನ್ನಣೆ - ಶ್ರಮಕ್ಕೆ !"

"ಹಾಗಾದರೆ ನೀವು ಬುದ್ಧಿವಂತರನ್ನು ದಡ್ಡರನ್ನಾಗಿಸಲು ಹೊರಟಿದ್ದೀರಿ."

"ಅಲ್ಲ, ಬುದ್ಧಿವಂತರು ದಡ್ಡರನ್ನು ಸುಲಿಯದಂತೆ ನೋಡಿಕೊಳ್ಳಲು ಹೊರಟಿದ್ದೇವೆ."

"ಬುದ್ಧಿವಂತರ ನೆರವಿಲ್ಲದೆ ನಿಮ್ಮ ಕಮ್ಯುನಿಸ್ಟ್ ರಾಜ್ಯ ಬದುಕಬಲ್ಲುದೇ?"

"ಬದುಕಬಲ್ಲದು."

"ಹೇಗೆ ?"

"ಸಾಮ್ಯ ರಾಜ್ಯಕ್ಕೆ ಅವಶ್ಯಕವಾದ ಬುದ್ಧಿ ಬಲವನ್ನು ಮಾರ್ಕ್ಸ್ ಲೆನಿನ್ ಒದಗಿಸಿದ್ದಾರೆ."

"ಬುದ್ಧಿ ಕೊಳಚೆಯ ನೀರಲ್ಲ - ಅದು ಹರಿಯುತ್ತಿರಬೇಕು."

"ನಿಜ - ಹರಿಯುವ ನೀರಿಗೆ ಅಣೆಕಟ್ಟು ಬೇಕು."

ವಾದ ಅತಿ ಗಹನವಾದುದನ್ನು ಕಂಡ ಧೀರಾಲಾಲ್,

"ಕಾಫಿ ಕೊಡಲೇ ?" ಎಂದ.

"ಕೊಡು"

ಎಂದು ಸಂಬಂಧಂ ಹೇಳಲು ಥರ್ಮಾಸ್ ಫ್ಲಾಸ್ಕಿನಲ್ಲಿದ್ದ ಕಾಫಿಯನ್ನು ಎರಡು ಕಪ್ಪುಗಳಿಗೆ ಸುರಿದು ಅವರಿಗಿತ್ತ.

ಕಾಫಿ ಮುಗಿಸಿ ಸಂಬಂಧಂ ಕಪ್ಪು, ಬಸಿಯನ್ನು ಧೀರಾಲಾಲನ ಕೈಗೆ ಕೊಡುತ್ತಾ,

"ನಮ್ಮ ಪಾರ್ಟಿ ರಷ್ಯಾದಲ್ಲಿ ನಡೆಯುವ ಮೇಡೇ ಉತ್ಸವಕ್ಕೆ ಒಂದು ಸಾಂಸ್ಕೃತಿಕ ನಿಯೋಗ ಕಳಿಸುವ ವಿಷಯ ಧೀರಾಲಾಲ್ ತಿಳಿಸಿದನೇ ಮೋಹಿನಿ ?"

"ತಿಳಿಸಿದರು."

ಕಪ್ಪು, ಬಸಿಗಳನ್ನು ತೆಗೆದುಕೊಂಡು ಧೀರಾಲಾಲ್ ಮೆಲ್ಲನೆ ಹೊರಗೆ ಹೋದ.

"ಉತ್ತರ ಭಾರತದಿಂದ ಒಂದು ತಂಡ, ದಕ್ಷಿಣ ಭಾರತದಿಂದ ಒಂದು ತಂಡ ಆರಿಸಿ ಕಳಿಸಲು ನಿರ್ಧರಿಸಿದ್ದೇವೆ."

"..............."

“ನೀನು ಹೋಗಲಿಚ್ಛಿಸುವೆಯಾ?”

“ನೀವು ಕಳಿಸುವುದಾದರೆ ಬೇಡವೆನ್ನುತ್ತೇನೆಯೇ? – ಕಲಾವತಿಯನ್ನು ಆರಿಸಿದ್ದೀರಾ?”

“ಇಲ್ಲ.”

“ಏಕೆ ?”

ಸಂಬಂಧಂ ನಕ್ಕು,

“ನನ್ನ ನಡತೆಯ ಬಗ್ಗೆ 'ಏಕೆ - ಏನು ?' ಎಂದು ಪ್ರಶ್ನಿಸುವ ಅಧಿಕಾರ ನಾನು ಯಾರಿಗೂ ಕೊಟ್ಟಿಲ್ಲ ಮೋಹಿನಿ. ಆದರೆ ...”

“ಅದರೆ... ?”

“ನಿನ್ನ ಬಗ್ಗೆ ವಿನಾಯಿತಿ ತೋರಿಸಲು ಸಿದ್ಧನಾಗಿದ್ದೇನೆ”

“ಏಕೆಯೆಂದು ಕೇಳಬಹುದೇ ?”

“ಕೇಳಬಹುದು - ನನಗೆ ನೀನು ಬೇಕು.”

ಮೋಹಿನಿ ನಡುಗಿದಳು.

ಉಗ್ರಭೈರವನಂತೆ ಎದುರಿಗೆ ಕುಳಿತಿದ್ದ ಸಂಬಂಧಂನನ್ನು ಕಣ್ಣೆತ್ತಿ ನೋಡಲೂ ಅವಳಿಗೆ ಧೈರ್ಯವಿಲ್ಲವಾಯಿತು.

ಹಣೆಯಮೇಲೆ ಕಾಣಿಸಿಕೊಂಡ ಬೆವರಹನಿಗಳನ್ನು ನಿವಾರಿಸಿಕೊಳ್ಳುತ್ತಾ,

“ನಾನು ಒಪ್ಪದಿದ್ದರೆ....”

ಸಂಬಂಧಂ ನಕ್ಕ.

“ನೀವು ನನ್ನನ್ನು ರಷ್ಯಾಕ್ಕೆ ಕಳಿಸಿಕೊಡುವುದಿಲ್ಲ.”

“ಅದು ಅಲ್ಪ ವಿಷಯ- ನನ್ನನ್ನು ನಿರಾಕರಿಸಿ ಯಾರೂ ಬದುಕಲು ಸಾಧ್ಯವಿಲ್ಲ.”

“ನಾನು ನಿಮ್ಮ ಪಾರ್ಟಿ ಸದಸ್ಯಳಲ್ಲ.”

“ಯಾರು ಹೇಳಿದವರು ? ಈಗಾಗಲೇ ನಿನ್ನ ಹೆಸರು ಪೋಲೀಸ್ ರಿಕಾರ್ಡುಗಳಲ್ಲಿ ಪಾರ್ಟಿ ಸಿಂಪತೈಜರ್ (Party sympathizer) ಎಂದು ದಾಖಲಾಗಿದೆ.”

“ಅದು ನಿಮಗೆ ಹೇಗೆ ಗೊತ್ತು ?”

“ಪೋಲೀಸ್ ಖಾತೆಯಲ್ಲಿರುವ ಅನೇಕರು ಪಾರ್ಟಿ ಮೆಂಬರುಗಳು.”

“ನೀವು ಇಂಥವರೆಂದು ನನಗೆ ತಿಳಿದಿದ್ದರೆ ನಾನು ಇಲ್ಲಿಗೆ ಬರುತ್ತಿರಲಿಲ್ಲ.”

“ನಾನೇನು ನಿನ್ನನ್ನು ಬಲವಂತಪಡಿಸುತ್ತಿಲ್ಲ. ಇಲ್ಲಿ ಇರಲು ನಿನಗೆ ಇಷ್ಟವಿಲ್ಲದಿದ್ದರೆ ನೀನು ಹೋಗಬಹುದು.”

ಎಂದು ಹೇಳಿದವನೇ ಎದ್ದು ಒಳಗಿನ ರೂಮಿನಲ್ಲಿ ಹೋಗಿ ಕುಳಿತ.

ಸಂಬಂಧಂ ಆಡಿದ್ದ ಪ್ರತಿಯೊಂದು ಮಾತನ್ನೂ ಮೋಹಿನಿ ವಿಚಾರಮಾಡಿ ನೋಡಿದಳು.

’ನನ್ನನ್ನು ನಿರಾಕರಿಸಿ ಯಾರೂ ಬದುಕಲು ಸಾಧ್ಯವಿಲ್ಲ.’

’ಈಗಾಗಲೇ ನಿನ್ನ ಹೆಸರು ಪೋಲೀಸ್ ರಿಕಾರ್ಡುಗಳಲ್ಲಿ ದಾಖಲಾಗಿದೆ.’

ಸಂಬಂಧಂ ಸಹವಾಸ ಬೆಳಸಬೇಕೇ ಇಲ್ಲಿಗೇ ಕೊನೆಗಾಣಿಸಬೇಕೇ ಎಂದು ದೀರ್ಘವಾಗಿ ಯೋಚಿಸಿದಳು.

’ರಷ್ಯಾ ಪ್ರವಾಸ - ಅಂತರ-ರಾಷ್ಟ್ರೀಯ ಖ್ಯಾತಿ ! ಇದು ನಿತ್ಯ ದೊರಕುವ ವಸ್ತುವೇ?’

’ನನ್ನ ಕೀರ್ತಿಮಹಲಿಗಿರುವ ನಿಚ್ಚಣಿಗೆಯಲ್ಲಿ ಸಂಬಂಧಂ ಒಂದು ಮೆಟ್ಟಿಲು.’

’ಈ ಮೆಟ್ಟಿಲನ್ನು ನಾನೇಕೆ ಮೆಟ್ಟಬಾರದು ?’

ಎಂದು ರೂಮಿನ ಬಾಗಿಲು ಬಳಿ ಹೋಗಿ ನಿಂತಳು.

ಸಂಬಂಧಂ ನಗುತ್ತಾ,

“ನೀನು ಬರುತ್ತೀ ಎಂದು ನನಗೆ ಗೊತ್ತಿತ್ತು ಮೋಹಿನಿ. ಅದಕ್ಕೇ ನಾನು ಕಾಯುತ್ತಾ ಇಲ್ಲಿ ಕುಳಿತುಕೊಂಡೆ” ಎಂದ.

# ೨೮

ಮೋಹಿನಿ ಧೀರಾಲಾಲ್ ಬಳಿ ಕಥಕ್‌ನೃತ್ಯ ಆರಂಭಿಸುವುದರ ಬಗ್ಗೆ ಕಲಾವತಿ ಸ್ವಲ್ಪವೂ ಉತ್ಸಾಹ ತೋರಲಿಲ್ಲ. ಮೋಹಿನಿ ಆ ಬಗ್ಗೆ ತನ್ನ ನಿರ್ಧಾರ ಸೂಚಿಸಲು ಕಲಾವತಿ ಪುನಃ ಆ ಪ್ರಸ್ತಾಪವನ್ನೇ ಎತ್ತಲಿಲ್ಲ.

ಮೋಹಿನಿ ಪ್ರತಿ ಸಂಜೆ ಧೀರಾಲಾಲನ ನೃತ್ಯಶಾಲೆಗೆ ಹೋಗಿ ಬರುತ್ತಿದ್ದಳು.

ಎರಡು ವಾರಗಳು ಕಳೆದವು.

ಒಂದು ಸಂಜೆ ಕಲಾಕ್ಷೇತ್ರದ ತರಗತಿ ಮುಗಿಸಿಕೊಂಡು ಮೋಹಿನಿ ನೃತ್ಯಶಾಲೆಗೆ ಹೋಗಲು, ಕಲಾವತಿ ಹಾಸ್ಟಲ್ಲಿಗೆ ಬಂದು ಕುಳಿತಳು.

ಅವಳ ಮನಸ್ಸಿಗೇನೋ ಮುಜುಗರ !

ತಾಯಿಯನ್ನು ನೋಡಿ ಒಂದು ವಾರವಾಗಿತ್ತು.

ರೂಮು ಬಿಟ್ಟು ಹೊರಟು ನೇರವಾಗಿ ಮನೆಗೆ ಬಂದಳು

ಜಯರಾಮ್ ತನ್ನ ರೂಮಿನಲ್ಲಿ ಕಾಣಬರದಿರಲು,

"ಅಮ್ಮಾ - ಜಯರಾಮಣ್ಣ ಎಲ್ಲಿ?" ಎಂದು ಕೇಳಿದಳು.

"ಅವನು ಊರಿನಲ್ಲಿಲ್ಲ ಕಲಾ - ಯಾರೋ ಕಕ್ಷಿಗಾರರು ಅವನನ್ನು ಮಧುರೆಗೆ ಕರೆದುಕೊಂಡು ಹೋಗಿದ್ದಾರೆ."

ತಾಯಿ, ಅತ್ತಿಗೆಯೊಡನೆ ಅವಳು ಮಾತನಾಡುತ್ತ ಕುಳಿತಳು.

ಅರ್ಧ ಗಂಟೆ ಕಳೆದಿರಬಹುದು.

ಮನೆಗೆ ಬಂದ ವಾಸನ್ ತಂಗಿಯನ್ನು ನೋಡಿ,

"ಯಾವಾಗ ಬಂದೆ ಕಲಾ ?" ಎಂದ.

"ಅರ್ಧ ಗಂಟೆಯಾಯಿತಣ್ಣಾ."

"ನಾನು ನಿನ್ನೊಂದಿಗೆ ಮಾತನಾಡಬೇಕಾಗಿದೆ. ನನ್ನ ರೂಮಿಗೇ ಬಾ."

ಕಲಾವತಿ, ಅಣ್ಣನನ್ನು ಅನುಸರಿಸಿ ಅವನ ರೂಮಿಗೆ ಹೋಗಿ ಕುಳಿತು,

"ಏನು ಸಮಾಚಾರ ವಾಸಣ್ಣ" ಎಂದಳು.

"ಭಾರೀ ಸಮಾಚಾರ ಇದೆ ಕಲಾ?"

“ಏನದು?”

“ಮಾಸ್ಕೋ ಯಾತ್ರೆ ನಿಶ್ಚಯವಾಯಿತು.”

“ಹಾಗೇನು ?”

ಎಂದು ಸಂತೋಷಗೊಂಡ ಕಲಾ,

“ನೀನು........” ಎಂದಳು.

“ನಿಯೋಗದಲ್ಲಿ ನಾನೂ ಇಲ್ಲ - ನೀನೂ ಇಲ್ಲ.”

ಕಲಾವತಿಯ ಮುಖ ಕಳೆಗುಂದಿತು.

ಅವಳು ಮನನೊಂದು,

“ನೀನೇ ನಿಯೋಗದ ನಾಯಕನೆಂದು ಇತ್ಯರ್ಥವಾಗಿತ್ತಲ್ಲವೇ ?”

“ಆಗಿತ್ತು - ಕೊನೆಗಳಿಗೆಯಲ್ಲಿ ಸಂಬಂಧಂ ಎಲ್ಲಾ ತಲೆಕೆಳಗು ಮಾಡಿ ಬಿಟ್ಟರು. ನಿಯೋಗದ ನಾಯಕ ಯಾರು ಬಲ್ಲೆಯಾ?”

“ಯಾರು?”

“ಧೀರಾಲಾಲ್.”

“ದೀರಾಲಾಲ್!”

“ಅವನ ಜತೆಗಾತಿ ಮೋಹಿನಿ.”

“ಮೋಹಿನಿ ಹೋಗುತ್ತಾರೆ.”

“ಹೂ!”

“ಸಂತೋಷ!”

“ಯಾರಿಗೆ ?”

“ನನಗೆ.”

“ಏಕೆ?”

“ಮೋಹಿನಿಗಾದರೂ ಅವಕಾಶ ಸಿಕ್ಕಿತಲ್ಲಾ ಎಂದು!”

“ಸಂಬಂಧಂ ಕಟಾಕ್ಷ ಬಿದ್ದ ಮೇಲೆ ಅವಕಾಶ ಸಿಕ್ಕದೆ ಏನು?”

“ಅಣ್ಣಾ! ನೀನು ಇಂಥ ಮಾತು ಆಡಬಾರದ, ಮೋಹಿನಿ ನನ್ನ ಗೆಳತಿ - ನನ್ನ ಸೋದರಿ.”

“ನೀನೊಂದು ಹಸುಮಗು.”

“ತಮ್ಮ ಕಲಾವೈಖರಿಯಿಂದ ಮೋಹಿನಿ ನಮ್ಮ ದೇಶಕ್ಕೆ ಕೀರ್ತಿ ತರುತ್ತಾರೆ.”

“ತಂದೇ ಇದ್ದಾರೆ.”

ಕಲಾವತಿ ಬೇಸತ್ತು,

“ಈ ಚರ್ಚೆ ಸಾಕು - ನಿಲ್ಲಿಸೋಣ.” ಎಂದಳು.

ಒಂದೆರಡು ನಿಮಿಷ ಮೌನ ತಳೆದು ಕುಳಿತ ವಾಸನ್ ಥಟ್ಟನೆ,

“ಕಲಾ, ನಾನೊಂದು ನಿರ್ಧಾರಕ್ಕೆ ಬಂದಿದ್ದೇನೆ.” ಎಂದ.

“ಏನದು – ನಿರ್ಧಾರ”

“ಪಾರ್ಟಿ ಸದಸ್ಯತ್ವಕ್ಕೆ ನಾನು ರಾಜೀನಾಮೆ ಕೊಟ್ಟುಬಿಡುತ್ತೇನೆ.”

ಹೌಹಾರಿದ ಕಲಾವತಿ, ಅಣ್ಣನ ಸಮೀಪಕ್ಕೆ ಬಂದು,

“ವಾಸಣ್ಣ - ನಿನಗೇನು ಹುಚ್ಚು ಹಿಡಿದಿದೆಯೋ ?”

“ಏಕೆ?”

“ಪಾರ್ಟಿ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟರೆ ನಿನ್ನ ಪರಿಣಾಮ ಏನಾಗುತ್ತದೆ ಬಲ್ಲೆಯಾ ? ಕಾಣಿಕ್ಯಂ, ಆದಿತ್ಯನ್, ವೆಂಬು ಇವರಿಗಾದ ಗತಿ ಜ್ಞಾಪಿಸಿಕೋ. ದಯೆಯಿಟ್ಟು ಅಂಥ ಹುಚ್ಚುಗೆಲಸಕ್ಕೆ, ಕೈ ಹಾಕಬೇಡ. ಸಂಬಂಧಂ ಅಷ್ಟಮ ಶನಿಯಂತೆ ನಿನ್ನನ್ನು ಕಾಡಿ, ನಾಶಮಾಡಿಬಿಡುತ್ತಾ.”

“ನಾನು ನಾಶವಾದರೂ ಚಿಂತೆಯಿಲ್ಲ ಕಲಾ - ಈ ರಾಕ್ಷಸ ಪಾರ್ಟಿಯ ಹೇಯವರ್ತನೆಗಳನ್ನು ಬಯಲಿಗೆಳೆಯಬೇಕು.”

“ಕಮ್ಯುನಿಸ್ಟ್ ಪಾರ್ಟಿಯ ಜಗನ್ನಾಥ ಚಕ್ರಗಳನ್ನೆದುರಿಸಲು ನಿನಗೆ ಸಾಧ್ಯವೇ ?”

“ಸಾಧ್ಯವೋ ಅಸಾಧ್ಯವೋ ನೋಡುತ್ತೇನೆ. ವೆಂಕಟಾಚಾರಿಯ ’ಕ್ಲೇರಿಯನ್ (Clarion) ಪತ್ರಿಕೆ’ ಇದ್ದೇ ಇದೆ-”

“ಈ ಹವ್ಯಾಸ ಬೇಡ ವಾಸಣ್ಣ - ನನ್ನ ಮಾತು ಕೇಳು.”

“ಅಸತ್ಯ - ಅಧರ್ಮ - ಅನ್ಯಾಯ ನಿರ್ಬಾಧಿತವಾಗಿ ಸಾಗಬೇಕೇ ?”

“ಮಾಸ್ಕೋಗೆ ನಿನ್ನ ಕಳಿಸಲಿಲ್ಲವೆಂದು ಈ ಅಪಪ್ರಚಾರ ಕೈಗೊಂಡಿರುವೆಯೆಂದು ಸಂಬಂಧಂ ಸಾರುತ್ತಾರೆ.”

“ಸಾರಲಿ-”

“ನಿಷ್ಪ್ರಯೋಜಕ ವಾದ ವಿವಾದದಲ್ಲಿ ನಿನ್ನ ಆಯುಷ್ಯ ಸವೆಯಬೇಕೇ? ಪಾರ್ಟಿಯಿಂದ ದೂರವಿದ್ದುಬಿಡು - ವಿರೋಧವೂ ಬೇಡ, ಸಖ್ಯವೂ ಬೇಡ.”

“ಆಗಲಿ – ಯೋಚಿಸುತ್ತೇನೆ - ಕಲಾ, ನೀನು ಒಂದು ಕೆಲಸ ಮಾಡಬೇಕು.”

“ಹೇಳು.”

“ಮೋಹಿನಿಯಿಂದ ದೂರ ಇರಬೇಕು. ಅವಳ ರೂಮಿನಲ್ಲೂ ಇರಬೇಡ - ಬೇರೆ ರೂಮಿಗೆ ಹೋಗಿಬಿಡು.”

“ಮೋಹಿನಿ ನನಗೆ ಯಾವ ಅನ್ಯಾಯನನ್ನೂ ಮಾಡಿಲ್ಲ”

“ಈಗವಳು ಮಾಡಿರುವುದು ಅನ್ಯಾಯವಲ್ಲವೇ ?”

“ಮೋಹಿನಿ ಜತೆ ನಾನಿದ್ದರೆ….”

“ನಿನ್ನ ವಿಷಯದಲ್ಲಿ ಅಂಥ ಅನುಮಾನವಿಲ್ಲ.”

“ಸರಿ - ಮಿಕ್ಕ ವಿಷಯ ನನಗೆ ಬಿಟ್ಟುಬಿಡು.” ಎಂದಳು.

ಮೋಹಿನಿಯಿಂದ ಬಂದ ಎಕ್ಸ್‌ಪ್ರೆಸ್ ಟೆಲಿಗ್ರಾಂ ನೋಡಿದ ಸಾಹುಕಾರ ಹೊನ್ನಪ್ಪನವರು, ಲೋಕಾಭಿರಾಮನನ್ನು ಕರೆದು ಅವನ ಕೈಯಲ್ಲಿ ಟೆಲಿಗ್ರಾಂ ಇಟ್ಟರು.

ಲೋಕಾಭಿರಾಮ ಅದನ್ನು ನೋಡಿಕೊಂಡ ಮೇಲೆ,

"ಇದರರ್ಥವೇನು ಲೋಕಾಭಿ" ಎಂದು ಕೇಳಿದರು.

"ಅಷ್ಟು ಗೊತ್ತಾಗಲ್ಲವೇ ಸ್ವಾಮಿ - ವಿರಹವ್ಯಥೆ !"

"ಹೋಗೋ ಮುಠ್ಠಾಳ !"

"…………..."

"ಮೋಹಿನಿ ಟ್ರಂಕ್ ಕಾಲ್ ಮಾಡದೆ ವೈರ್ ಏಕೆ ಮಾಡಿದಳು."

"ದಾಮೋದರನ್ ಆಫೀಸಿನಲ್ಲಿ ಇದ್ದರೋ ಇಲ್ಲವೋ ?"

"ಯಾವಾಗ ಹೊರಡೋಣ."

"ದಣಿ ಚಿತ್ತ ಬಂದಾಗ."

"ಈಗಲೇ ಹೊರಡಬಹುದು - ಪ್ರಯೋಜನವಿಲ್ಲ - ನಾವು ಮದರಾಸ್ ಸೇರುವ ವೇಳೆಗೇ ರಾತ್ರಿ ಒಂಭತ್ತಾಗುತ್ತದೆ. ಮೋಹಿನಿ ಆ ಹೊತ್ತಿನಲ್ಲಿ ಹಾಸ್ಟಲ್‌ನಿಂದ ಬರುವುದಕ್ಕಾಗುವುದಿಲ್ಲ."

"ಮಾಮೂಲ್‌ನಂತೆ ರಾತ್ರಿ ಹೊರಡೋಣ."

"ಅದೇ ಸರಿ"

ಎಂದು ಸಾಹುಕಾರರು ಒಪ್ಪಿಕೊಂಡು,

"ನಾವು ರಾತ್ರಿ ಹೊರಟು ಬೆಳಿಗ್ಗೆ ಬರುತ್ತೇವೆ ಎಂದು ಮೋಹಿನಿಗೊಂದು ಫೋನೋಗ್ರಾಂ ಕೊಟ್ಟುಬಿಡು - ಹಾಗೇ ಸದಾಶಿವಂಗೆ ರೂಮ್ ರಿಸರ್ವೇಷನ್‌ಗೆ ವೈರ್ ಮಾಡು" ಎಂದರು.

ಮಾರನೆಯ ಬೆಳಿಗ್ಗೆ ಆರು ಗಂಟೆಗೇ ಸಾಹುಕಾರರು, ಲೋಕಾಭಿರಾಮ ಮದರಾಸ್ ತಲುಪಿ 'ರಾಯಲ್ ಲಾಡ್ಜ್'ನಲ್ಲಿ ತಂಗಿದರು.

ಸಾಹುಕಾರರು ಸ್ನಾನ ಮುಗಿಸಿಕೊಂಡು ಬರುವಷ್ಟರಲ್ಲಿ ತನ್ನ ಸ್ನಾನ ಮುಗಿಸಿಕೊಂಡು ಬಂದ ಲೋಕಾಭಿರಾಮ,

"ನಾನು ಹೋಗಿ ಮೋಹಿನಿದೇವಿಯವರನ್ನು ಕರೆದುಕೊಂಡು ಬರಲೇ?" ಎಂದ.

"ಈ ವೇಳೆಗೆ ಹೋಗಿ ಬರದೆ, ಇನ್ನೂ ಇಲ್ಲೇ ಕುಳಿತಿದ್ದೀಯಾ? ಹೋಗಿ - ಬೇಗ ಬಾ" ಎಂದರು.

ಸುಮಾರು ಎಂಟು ಗಂಟೆ ವೇಳೆಗೆ ಮೋಹಿನಿ ಬರಲು ಅವಳನ್ನು ಬಿಗಿದಪ್ಪಿದ ಸಾಹುಕಾರರು,

"ಯಾಕೆ ಇಷ್ಟು ತಡ ಮೋಹಿನಿ" ಎಂದರು.

"ಈಗಿನ್ನೂ ಎಂಟು - ತಡವೆಲ್ಲಿಂದ ಬಂತು. ಲೋಕಾಭಿರಾಮ್ ಬಂದು ಕೂಡಲೆ ಹೊರಟೆ."

ಮುಕುಂದ ಉಪಾಹಾರ, ಕಾಫಿ ತಂದಿಟ್ಟು ಹೋದ.

ಇಬ್ಬರೂ ಉಪಹಾರ ಸ್ವೀಕರಿಸುತ್ತಿದ್ದಾಗ ಸಾಹುಕಾರರು,

"ಟ್ರಂಕ್ ಕಾಲ್ ಏಕೆ ಮಾಡಲಿಲ್ಲ?" ಎಂದು ಕೇಳಿದರು.

"ದಾಮೋದರನ್ ರಜಾ ತೆಗೆದುಕೊಂಡಿದ್ದಾರೆ. ಆಫೀಸ್ ಬಾಗಿಲು ತೆಗೆದಿರಲಿಲ್ಲ."

"ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಟ್ಟಿದ್ದೇಕೆ.?"

"ಏಕೆ – ಯೋಚಿಸಿ?"

"ನೀನೇ ಹೇಳು - ನಿನ್ನ ಬಾಯಿಂದಲೇ ಕೇಳುವುದಕ್ಕೆ ನನಗೆ ಇಷ್ಟ."

"ಮೊನ್ನೆ ರಾತ್ರಿ ನನಗೊಂದು ಕೆಟ್ಟ ಕನಸಾಯಿತು – ಭಯವಾಗಿ ನಿಮ್ಮನ್ನು ನೋಡಲು ಕಾತರಗೊಂಡೆ."

"ಏನದು ಕನಸು ?"

"ಹೇಳಿದರೆ ನೀವು ನಗುತ್ತೀರಿ."

"ಇಲ್ಲ – ಹೇಳು –"

"ನೀವು ಬೇರೊಬ್ಬರ ಸ್ನೇಹ ಮಾಡಿ, ನನ್ನನ್ನು ದೂರ ತಳ್ಳಿದಂತೆ ಕನಸಾಯಿತು –"

ಸಾಹುಕಾರರು ಗಹಗಹಿಸಿ ನಗುತ್ತಾ,

"ಇಷ್ಟಕ್ಕೆ ಗಾಬರಿಗೊಂಡೆಯಾ?"

"ಇಷ್ಟು ಸಾಲದೇ ?"

"ಅಯ್ಯೋ - ಹುಚ್ಚು ಹುಡುಗಿ."

ಮೋಹಿನಿ ಸಾಹುಕಾರರ ಬಳಿ ಸರಿದು, ಲಲ್ಲೆ ಗರೆಯುತ್ತಾ,

“ನನ್ನ ಕನಸು ಸುಳ್ಳಲವೇ ?”

“ನಿನಗೆಲ್ಲೋ ಭ್ರಾಂತಿ!”

“ಒಂದು ತಿಂಗಳಾದರೂ ನೀವು ಇಲ್ಲಿಗೇಕೆ ಬರಲಿಲ್ಲ.”

“ನಮ್ಮ ಮಂತ್ರಿ ಮಂಡಳಕ್ಕೆ ಡಯಾಬಿಟೀಸ್ ರೋಗ - ಅದಕ್ಕೆ ನಾನು ನಿತ್ಯ ಇನ್ಸುಲಿನ್ ಇಂಜಕ್ಷನ್ ಕೊಡುತ್ತಿರಬೇಕು - ಅದಿರಲಿ ನಿನ್ನ ಪಾಠ ಹೇಗೆ ಸಾಗುತ್ತಿದೆ ?”

“ಚೆನ್ನಾಗಿ ನಡೆದಿದೆ. ನಾನೀಗ ಭರತನಾಟ್ಯದ ಜತೆಗೆ ಕಥಕ್ ನೃತ್ಯವನ್ನೂ ಕಲಿಯುತ್ತಿದ್ದೇನೆ.”

“ಅಡೆಯಾರಿನಲ್ಲಿ ಅದಕ್ಕೂ ಅವಕಾಶವಿದೆಯೇ ?”

“ಅಲ್ಲಲ್ಲ - ಧೀರಾಲಾಲರ ನೃತ್ಯಶಾಲೆಯಲ್ಲಿ.”

“ಧೀರಾಲಾಲ್ ಯಾರು ?”

“ಬಹಳ ಪ್ರಸಿದ್ಧ ಕಥಕ್ ನೃತ್ಯಕಾರರು - ಅವರ ಮನೆತನ ಕಥಕ್ ನೃತ್ಯಕ್ಕೆ ಹೆಸರಾದುದು.”

“ನಿನಗೆ ಪುರಸತ್ತೆಲ್ಲಿದೆ –”

“ಸಂಜೆ ಒಂದು ಗಂಟೆ ಧೀರಾಲಾಲರ ಶಾಲೆಗೆ ಹೋಗಿ ಬರುತ್ತೇನೆ.”

ಸಾಹುಕಾರರು ಮೆಲ್ಲನೆದ್ದು ಮೇಜಿನ ಕಡೆ ಹೋದರು.

ಮೋಹಿನಿ ಧಾವಿಸಿ ಬಂದು ಮೇಜಿಗೆ ಅಡ್ಡಲಾಗಿ ನಿಂತು,

“ಈಗಲೇ ಬೇಡ” ಎಂದಳು.

ಸಾಹುಕಾರರು ನಕ್ಕು,

“ಇನ್ನೇನು ಬೇಕು” ಎಂದರು.

ಸಾಹುಕಾರರು ಮೋಹಿನಿಯ ತೋಳ ತೆಕ್ಕೆಯಿಂದ ಬಿಡುಗಡೆ ಹೊಂದುವ ವೇಳೆಗೆ ಹನ್ನೊಂದು ಗಂಟೆಯಾಯಿತು.

ಲೋಕಾಭಿರಾಮನನ್ನು ಬರಮಾಡಿಕೊಂಡು, ಪಾನಕಪೂಜೆ ಆರಂಭಿಸಿದರು.

ಲೋಕಾಭಿರಾಮ ಒಂದು ಗ್ಲಾಸ್ ಮುಗಿಸಿ,

“ನಾವು ಯೋಚಿಸಿದ್ದೇ ತಾನೇ !” ಎಂದ.

“ಯಾವದು ?”

“ವಿರಹವ್ಯಥೆ”

"ಹಾಗೇ ಕಾಣತ್ತೆ"

ಎಂದು ಸಾಹುಕಾರರು ನಕ್ಕರು.

ಸ್ನಾನಗೃಹದಿಂದ ಹೊರಬಂದ ಮೋಹಿನಿ ಸಾಹುಕಾರರ ಪಕ್ಕದಲ್ಲಿ ಕುಳಿತು, ಅವರ ಗ್ಲಾಸನ್ನೇ ಕೈಗೆ ತೆಗೆದುಕೊಂಡಳು, ಬೇರೊಂದು ಗ್ಲಾಸಿಗೆ ಮದ್ಯ ಸುರುವಿ, ಲೋಕಾಭಿರಾಮ ಸಾಹುಕಾರರ ಕೈಗಿತ್ತ.

ಒಂದು ಗಂಟೆಯ ವೇಳೆಗೆ ಒಂದು ದೊಡ್ಡ ಬಾಟಲ್ ಮುಗಿದಿತ್ತು, ಎರಡನೆಯ ಬಾಟಲ್ ತೆಗೆದ ಲೋಕಾಭಿರಾಮ, ಮೂರು ಗ್ಲಾಸುಗಳನ್ನೂ ಭರ್ತಿ ಮಾಡಿದ.

ಮೋಹಿನಿ ಮೆಲ್ಲನೆ ಸಾಹುಕಾರರಿಗೆ ಕಣ್ಸನ್ನೆ ಮಾಡಲು, ಲೋಕಾಭಿರಾಮ ಗ್ಲಾಸ್ ಮುಗಿಸುವವರೆಗೆ ಸುಮ್ಮನಿದ್ದ ಸಾಹುಕಾರರು ಅವನಿಗೆ ಸೂಚನೆಯಿತ್ತರು.

ಲೋಕಾಭಿರಾಮ ಎದ್ದು ಬಾಗಿಲು ಹಾಕಿಕೊಂಡು ಹೊರಗೆ ಹೋದ.

ಬಾಗಿಲಿನ ಒಳಚಿಲಕ ಹಾಕಿದ ಮೋಹಿನಿ, ಸಾಹುಕಾರರ ತೊಡೆಯೇರಿ ಕುಳಿತು,

"ನಾನು ಒಂದು ಮಾತು ಹೇಳುತ್ತೇನೆ. ನೀವು ಕೋಪ ಮಾಡಿಕೊಳ್ಳಬಾರದು."

"ನಿನ್ನ ಮೇಲೆ ನಾನು ಕೋಪಮಾಡಿಕೊಳ್ಳುತ್ತೇನೆಯೇ – ಹೇಳು ಮೋಹಿನಿ."

"ರಷ್ಯಾಗೆ ಹೋಗಲು ನನಗೆ ಆಮಂತ್ರಣ ಬಂದಿದೆ."

ಹೌಹಾರಿದ ಸಾಹುಕಾರರು,

"ಏನಂದೆ ?" ಎಂದರು.

"ರಷ್ಯಾಗೆ ಹೋಗಲು ಆಮಂತ್ರಣ."

"ಕಮ್ಯುನಿಸ್ಟ್ ಪಾರ್ಟಿಯಿಂದಲೇ?"

"ಅಲ್ಲ - ಪೀಪಲ್ಸ್ ಆರ್ಟ್ಸ್ ಸಂಸ್ಥೆಯಿಂದ."

"ಅದೂ ಕಮ್ಯುನಿಸ್ಟ್ ಸಂಸ್ಥೆ."

"ಹೋಗಲೇ?"

"ನಿಯೋಗದ ನಾಯಕರು ಯಾರು ?"

"ನನ್ನ ಕಥಕ್ ಗುರುಗಳು - ಧೀರಾಲಾಲ್‌ಜೀ."

"ನಿನ್ನೊಂದಿಗೆ ಯಾರು ಬರುತ್ತಾರೆ ?"

“ದಕ್ಷಿಣ ಭಾರತದಿಂದ ಹನ್ನೆರಡು ಜನ - ಉತ್ತರ ಭಾರತದಿಂದ ಹನ್ನೆರಡು ಜನ - ಆರು ವಾರಗಳ ಪ್ರವಾಸ !”

“ನಿನ್ನ ಗೆಳತಿ ಕಲಾವತಿ ?”

“ಅವಳೂ ಬರುತ್ತಾಳೆ.”

“ನಾನು ಕಾಂಗ್ರೆಸ್ ನಾಯಕ ಎನ್ನುವುದನ್ನು ಮರೆತೆಯಾ ಮೋಹಿನಿ.”

“ಕಲೆಗೂ ರಾಜಕೀಯಕ್ಕೂ ಏನು ಸಂಬಂಧ?”

“ರಷ್ಯಾದಲ್ಲಿ ರಾಜಕೀಯವೇ ಕಲೆ, ಕಲೆಯೇ ರಾಜಕೀಯ.”

“ಇಂಥ ಅವಕಾಶ ನನಗೆ ಪುನಃ ಸಿಕ್ಕುವುದಿಲ್ರೀ!”

“ಸಾವಧಾನವಾಗಿ ನನ್ನ ಮಾತು ಕೇಳು ಮೋಹಿನಿ - ಈಗ ರಷ್ಯಾಗೆ ಚೀಣಾಗೆ ಹೋಗುವುದು ದೊಡ್ಡ ವಿಷಯವಾಗಿಲ್ಲ. ನಮ್ಮ ಮೃಗಾಲಯದ ಪ್ರಾಣಿಗಳೂ ರಷ್ಯಾಗೆ ಹೋಗಿ ಬರುತ್ತಿವೆ. ಕೇಂದ್ರ ಸರ್ಕಾರ ಎಲ್ಲ ವಿದೇಶಗಳಿಗೂ ಸಾಂಸ್ಕೃತಿಕ ನಿಯೋಗ ಕಳಿಸುತ್ತಿದೆ. ನೀನು ಕಮ್ಯುನಿಸ್ಟ್ ಪಾರ್ಟಿಯ ಆಮಂತ್ರಣ ಸ್ವೀಕರಿಸಿದರೆ ಕೇಂದ್ರ ಸರ್ಕಾರ ನಿನಗೆ ಆಮಂತ್ರಣ ಕೊಡುವುದಿಲ್ಲ. ನಿನ್ನನ್ನು ವಿದೇಶಗಳಿಗೆ ನಾನು ಕರೆದುಕೊಂಡು ಹೋಗುತ್ತೇನೆ. ಈ ಆಮಂತ್ರಣ ಸ್ವೀಕರಿಸಬೇಡ.”

ಮೋಹಿನಿ ಪೆಚ್ಚುಮೋರೆ ಹಾಕಿಕೊಂಡಳು.

“ಕಮ್ಯುನಿಸ್ಟರ ಸಹವಾಸ ಕೆಟ್ಟ ಸಹವಾಸ ಮೋಹಿನಿ. ನಿನ್ನ ಕಲೆಯನ್ನವರು ನಿರ್ನಾಮ ಮಾಡಿ, ಪಾರ್ಟಿ ಕೂಲಿಯನ್ನಾಗಿ ಮಾಡಿಕೊಳ್ಳುತ್ತಾರೆ. ನಾಳೆಯೇನಾದರೂ ಕೇಂದ್ರ ಕಮ್ಯುನಿಸ್ಟ್ ಪಾರ್ಟಿಯನ್ನು ಸರ್ಕಾರ 'ಬ್ಯಾನ್'(Ban) ಮಾಡಿದರೆ, ನೀನು ತೊಂದರೆಗೆ ಸಿಕ್ಕಿಕೊಳ್ಳುತ್ತೀ.”

“ಧೀರಾಲಾಲರಿಗೆ ಏನು ಹೇಳಲಿ ?”

“ಹೇಳುವುದೇನು - ಬರುವುದಕ್ಕಾಗುವುದಿಲ್ಲವೆಂದು ಹೇಳು.”

“ನಾನು ತುಂಬ ಆಸೆಯಿಟ್ಟುಕೊಂಡಿದ್ದೆ.”

“ನನ್ನ ಮಾತನ್ನು ಅಸಡ್ಡೆ ಮಾಡಿ ಹೋಗುವೆ ಹಾಗಿದ್ದರೆ ಹೋಗು”

ಎಂದು ಬಿರುಸಾಗಿ ನುಡಿದರು.

ಸಾಹುಕಾರರ ತೊಡೆ ಬಿಟ್ಟು ಕೆಳಗಿಳಿದ ಮೋಹಿನಿ, ಅಳುತ್ತ ಹೋಗಿ, ಹಾಸಿಗೆಯ ಮೇಲೆ ದೊಪ್ಪನೆ ಬಿದ್ದಳು.

ಅವಳನ್ನು ಸಂತೈಸುವುದಕ್ಕೆ ಸಾಹುಕಾರರು ಹಾಸಿಗೆಯ ಬಳಿ ಹೋಗಲಿಲ್ಲ.

ತಮ್ಮ ಗ್ಲಾಸ್ ಖಾಲಿ ಮಾಡಿ ಮೇಜಿನ ಮೇಲಿಟ್ಟು ಹೊರಗೆ ಹೊರಟುಹೋದರು.

ಬೋರಲಾಗಿ ಮಲಗಿದ್ದ ಮೋಹಿನಿ ಸಾಹುಕಾರರು ಹೊರಟು ಹೋದುದನ್ನು ನೋಡಲಿಲ್ಲ.

ಲೋಕಾಭಿರಾಮನ ರೂಮಿಗೆ ಸಾಹುಕಾರರು ಬಂದು ಕುಳಿತು,

"ನನ್ನ ರೂಮಿನಲ್ಲಿ ವಿಸ್ಕಿ ಶೀಷೆ, ಗ್ಲಾಸು ಇದೆ - ಇಲ್ಲೇ ತೆಗೆದುಕೊಂಡು ಬಾ ಲೋಕಾಭಿ" ಎಂದರು.

"ಯಾಕೆ ಸ್ವಾಮಿ - ಏನಾಯಿತು ?"

"ಏನೂ ಆಗಲಿಲ್ಲ - ಹೇಳಿದಷ್ಟು ಮಾಡು."

ಲೋಕಾಭಿರಾಮ ಪಕ್ಕದ ರೂಮಿನಲ್ಲಿದ್ದ ವಿಸ್ಕಿ ಶೀಷೆ, ಗ್ಲಾಸು, ಸೋಡಾ ಬಾಟಲ್‌ಗಳನ್ನು ತಂದಿಟ್ಟ.

"ಗ್ಲಾಸಿಗೆ ಬಗ್ಗಿಸೋ ಮಂಕು ಮೂದೇವಿ."

ಲೋಕಾಭಿ ಎರಡು ಗ್ಲಾಸುಗಳಿಗೆ ಮದ್ಯ ಬಗ್ಗಿಸಿದ.

ಸಾಹುಕಾರರು ಎರಡು ಗ್ಲಾಸ್ ಮುಗಿದ ಮೇಲೆ ಲೋಕಾಭಿ ಮೆಲ್ಲನೆ,

"ಮೋಹಿನಿದೇವಿಯವರು ಅಳುತ್ತಾ ಮಲಗಿದ್ದಾರೆ."

"ಬಿದ್ದಿರಲಿ."

"ಏನಾಯಿತು ಸ್ವಾಮಿ."

"ಅವಳು ರಷ್ಯಾಗೆ ಹೋಗಬೇಕಂತೆ!"

"ಯಾರ ಜತೆ?"

"ಅದು ಯಾವನೋ ಧೀರಾಲಾಲನಂತೆ - ಅವನ ಜತೆ."

"ಎಷ್ಟು ದಿನವಂತೆ ಪ್ರವಾಸ ?"

"ಆರು ವಾರ."

"ಹೋಗಿ ಬರಲಿ ಬಿಡಿ ಸ್ವಾಮಿ – ಅದಕ್ಕೇನು?"

"ಮುಠ್ಠಾಳ - ಕಮ್ಯುನಿಸ್ಟ್ ಪಾರ್ಟಿ ಜತೆ ಅವಳನ್ನು ಕಳಿಸಿಕೊಡಲೇ ?"

"ಇವರನ್ನು ರಷ್ಯಾಗೆ ಕಳಿಸುತ್ತಿರುವವರು ಕಮ್ಯುನಿಸ್ಟ್ ಪಾರ್ಟಿಯವರೇ?"

“ಹೂ - ಇನ್ನು ಯಾರು ?- ನಿನ್ನ ಸೋದರಮಾವನೇ ?”

“ಈ ಯೋಚನೆ ಬಿಟ್ಟು ಬಿಡಿ ಎಂದು ನಾನು ಮೋಹಿನಿದೇವಿಯವರಿಗೆ ಒಂದು ಮಾತು ಹೇಳಲೇ ?”

“ನನ್ನ ಮಾತನ್ನೇ ಕೇಳದಿದ್ದವಳು ನಿನ್ನ ಮಾತು ಕೇಳುತ್ತಾಳೆಯೇ ?”

“ಅವರಿಗೆ ಈಗ ಏನು ಕಡಿಮೆಯಾಗಿದೆಯೆಂದು ರಷ್ಯಾಕ್ಕೆ ಹೋಗಬೇಕು ?”

“ಅದು ಭಗವಂತನಿಗೇ ಗೊತ್ತು.”

ಇನ್ನು ಮಾತು ಬೆಳಸುವುದು ಉಚಿತವಲ್ಲವೆಂದರಿತ ಲೋಕಾಭಿರಾಮ ಸುಮ್ಮನಾದ.

ಅಸಂತುಷ್ಟರಾಗಿದ್ದ ಸಾಹುಕಾರರು ಪ್ರಮಾಣ ಮೀರಿ 'ಪಾನಕ' ಸ್ವೀಕರಿಸುತ್ತ ಕುಳಿತರು.

ಥಟ್ಟನೆ ಬಾಗಿಲು ತೆರೆದ ಶಬ್ದವಾಯಿತು.

ಯಾರೋ ಒಳಗೆ ಬಂದರು.

ಮೋಹಿನಿ !

ಬಾಗಿಲಲ್ಲೇ ನಿಂತ ಮೋಹಿನಿ,

“ಏಕೆ ಇಲ್ಲಿ ಬಂದಿರಿ ?” ಎಂದಳು.

ಸಾಹುಕಾರರು ಉತ್ತರಿಸಲಿಲ್ಲ.

“ಏಳಿ - ನಮ್ಮ ರೂಮಿಗೆ ಹೋಗೋಣ.”

“ನೀನು ಹೋಗು - ನಾನು ಬರುತ್ತೇನೆ.”

“ನನ್ನ ಜತೆ ಬನ್ನಿ.”

“ನಿನ್ನ ಹಿಂದೆಯೇ ಬರುತ್ತೇನೆ – ಹೋಗು”

ಮೋಹಿನಿ ಹೊರೆಗೆ ಹೊರಟು ತನ್ನ ರೂಮಿಗೆ ಬಂದು ನಿಂತಳು.

ಅವಳನ್ನೇ ಹಿಂಬಾಲಿಸಿದ ಸಾಹುಕಾರರು ಒಳಗೆ ಬರಲು, ಅವರನ್ನು ಬಿಗಿದಪ್ಪಿದ ಮೋಹಿನಿ, ಎದೆಯ ಮೇಲೆ ತಲೆಯಿಟ್ಟು ಕಂಬನಿಗರೆಯುತ್ತಾ,

“ನೀವು ನನ್ನ ಮೇಲೆ ಕೋಪ ಮಾಡಿಕೊಳ್ಳುವುದಿಲ್ಲವೆಂದಿರಿ?!”

“ನೀನು ಕೋಪ ಬರಿಸಿದರೆ ಏನು ಮಾಡಲಿ?”

“ಹೋಗಲಿ ಬಿಡಿ . ನಾನು ರಷ್ಯಾಕ್ಕೆ ಹೋಗುತ್ತೇನೆ ಎಂದುದಕ್ಕೆ ತಾನೇ ಇಷು ರಾದ್ಧಾಂತ - ನಾನು ಹೋಗುವುದಿಲ್ಲ.” ಎಂದಳು.

ಆ ಪ್ರಶ್ನೆಯನ್ನು ಕುರಿತು ಸಾಹುಕಾರರು ದೀರ್ಘವಾಗಿ ರಾತ್ರಿಯೆಲ್ಲಾ ಆಲೋಚಿಸಿದರು.

'ಮೋಹಿನಿಗೆ ಸಿಕ್ಕಿರುವ ಅವಕಾಶಕ್ಕೆ ನಾನೇಕೆ ಕಲ್ಲು ಹಾಕಬೇಕು. ರಷ್ಯಾಗೆ ಹೋಗಬೇಡವೆಂದರೆ ಅವಳು ದುಃಖಪೀಡಿತಳಾಗುತ್ತಾಳೆ - ಆರು ವಾರಗಳು ತಾನೇ - ಹೋಗಿ ಬರಲಿ.'

'ಈಗ ನಾನು ಅವಳ ಪ್ರವಾಸ ನಿಲ್ಲಿಸಿದರೆ, ಅವಳಿಗೆ ಯೂರೋಪ್ ಪ್ರವಾಸ ಮಾಡಿಸುವ ಹೊಣೆ ನನ್ನದಾಗುತ್ತದೆ. ಅನವಶ್ಯಕ ಜವಾಬ್ದಾರಿಯನ್ನು ನಾನೇಕೆ ಹೊತ್ತುಕೊಳ್ಳಬೇಕು.'

ಬೆಳಗಾಯಿತು.

ಮೋಹಿನಿಯ ಮುಖದಲ್ಲಿ ಗೆಲುವಿಲ್ಲ- ಕಳೆಯಿಲ್ಲ.

ಅವಳು ಸ್ನಾನ ಮುಗಿಸಿ, ವಸ್ತ್ರ ಬದಲಿಸಿಕೊಂಡು ಬರಲು ಸಾಹುಕಾರರು,

"ಮೋಹಿನಿ......." ಎಂದರು.

"ಏನು ?"

"ನಾನು ಇವತ್ತು ಪ್ರಯಾಣ ಮಾಡುತ್ತೇನೆ."

"ಇಷ್ಟು ಬೇಗ - ಏನವಸರ ?"

"ಮುನಿಸಿಪಲ್ ಎಲೆಕ್ಷನ್ನಿಗೆ ಭೂಮಿಕೆ ಸಿದ್ಧಗೊಳಿಸಬೇಕಾಗಿದೆ."

"…………..."

"ರಷ್ಯಾಗೆ ಹೋಗುವ ವಿಚಾರ………"

"ಆ ವಿಷಯ ನಿನ್ನೆ ಇತ್ಯರ್ಥವಾಗಿದೆ."

"ಇಲ್ಲ - ಕೇಳು. ರಷ್ಯಾ ಪ್ರವಾಸ ತಪ್ಪಿಹೋದರೆ ನಿನ್ನ ಮನಸ್ಸಿಗೆ ತುಂಬ ಬೇಸರವಾಗುತ್ತದೆಯೇ?"

"ಧೀರಾಲಾಲ್‌ಜೀ ನನ್ನ ಮೇಲೆ ಅಭಿಮಾನವಿಟ್ಟು ಕಥಕ್ ನೃತ್ಯ ಹೇಳಿಕೊಡುತ್ತಿದ್ದಾರೆ. ಪ್ರದರ್ಶನಗಳಲ್ಲಿ ಈವರೆಗೆ ತಮ್ಮ ಜತೆಗಾತಿಯಾಗಿದ್ದ ಕಾಂಚನಮಾಲೆಯನ್ನು ಬಿಟ್ಟು, ನನ್ನನ್ನೇ ಜತೆಗಾತಿಯನ್ನಾಗಿ ಆರಿಸಿಕೊಂಡಿದ್ದಾರೆ. ನಾನು ಪ್ರವಾಸ ಹೋಗುವುದಿಲ್ಲವೆಂದರೆ ಅವರ ಸ್ಥಿತಿ ಪೇಚಾಟಕ್ಕಿಟ್ಟಿಕೊಳ್ಳುತ್ತದೆ. ಆಡಿದ ಮಾತಿಗೆ ನಾನು ತಪ್ಪಿದಂತಾಗುತ್ತದೆ. ವಿದ್ಯಾಗುರುಗಳಿಗೆ ಅಪಮಾನ ಮಾಡಿದೆನಲ್ಲಾ ಎಂಬ ದುಃಖ ನನ್ನ ಮನಸ್ಸಿನಲ್ಲುಳಿಯುತ್ತದೆ."

ಸಾಹುಕಾರರು ಯೋಚಿಸುತ್ತಾ,

"ನನ್ನ ಅಭಿಪ್ರಾಯ ಬದಲಾಯಿಸಿದ್ದೇನೆ ಮೋಹಿನಿ. ರಷ್ಯಾಗೆ ಹೋಗಿಬಿಟ್ಟು ಬಾ."

ಮೋಹಿನಿ ತನ್ನ ಕಿವಿಗಳನ್ನು ತಾನೇ ನಂಬದಾದಳು.

"ನಿಜವಾಗಿ !"

"ಖಂಡಿತವಾಗಿ!"

"ಬೇಡಿ. ನಾನು ಹೋಗುವುದಿಲ್ಲ. ನನಗೆ ರಷ್ಯಾ ಪ್ರವಾಸ ಮುಖ್ಯವಲ್ಲ - ನೀವು ಮುಖ್ಯ - ಇಂದಲ್ಲ ನಾಳೆ ನೀವೇ ನನ್ನನ್ನು ರಷ್ಯಾಗೆ ಕರೆದುಕೊಂಡು ಹೋಗುತ್ತೀರಿ."

"ಪೂರ್ವಾಪರಗಳನ್ನೆಲ್ಲಾ ವಿಚಾರ ಮಾಡಿ ಒಂದು ನಿರ್ಧಾರಕ್ಕೆ ಬಂದಿದ್ದೇನೆ ಮೋಹಿನಿ - ಮನಃಪೂರ್ವಕವಾಗಿ ಸಮ್ಮತಿ ಕೊಡುತ್ತಿದ್ದೇನೆ. ಹೋಗಿ ಬಾ."

ಆನಂದಭರಿತಳಾದ ಮೋಹಿನಿ ಸಾಹುಕಾರರನ್ನು ಪದೇ ಪದೇ ಮುದ್ದಿಟ್ಟು,

"ನೀವು ಎಷ್ಟು ಒಳ್ಳೆಯವರ್ರೀ" ಎಂದಳು.

"ನಿನ್ನ ಪ್ರಯಾಣ ಯಾವಾಗ ?"

"ಇನ್ನು ಎರಡು ವಾರಗಳಲ್ಲಿ... ನನಗೆ... ನನಗೆ ..."

"ನಿನಗೇನಾಗಬೇಕು ?"

"ಸ್ವಲ್ಪ ಬಟ್ಟೆ ಬರೆ ಬೇಕು."

"ತೆಗೆದುಕೋ."

"ಸ್ವಲ್ಪ ನಗದು ಹಣ ಬೇಕು."

"ಅದನ್ನೂ ಕೊಡುತ್ತೇನೆ"

"ಸ್ನಾನ ಮುಗಿಸಿ - ಪೇಟೆಗೆ ಹೋಗಿ ಬರೋಣ?" ಎಂದಳು.

ಸಂಜೆಯವರೆಗೂ ಅವಳೊಂದಿಗಿದ್ದ ಸಾಹುಕಾರರು, ಸಂಜೆ ಅವಳನ್ನು ಹಾಸ್ಟಲ್ಲಿನಲ್ಲಿ ಬಿಟ್ಟು, ಲೋಕಾಭಿರಾಮನೊಂದಿಗೆ ಊರಿಗೆ ಪ್ರಯಾಣ ಬೆಳೆಸಿದರು.

ಸಿದ್ದಪ್ಪ ಶರವೇಗದಲ್ಲಿ ಕಾರ ಮುನ್ನಡೆಸುತ್ತಿದ್ದ,

ಸಾಹುಕಾರರು ಮೌನವಾಗಿ ಕುಳಿತು ಒಂದಾದ ಮೇಲೊಂದು ಸಿಗರೇಟ್ ಸೇದುತ್ತಿದ್ದರು.

ಲೋಕಾಭಿರಾಮ ಮೆಲ್ಲನೆ,

"ರಷ್ಯಾಪ್ರವಾಸದ ವಿಷಯ ಏನಾಯಿತು ಸ್ವಾಮಿ" ಎಂದ.

"ಮೋಹಿನಿ ಪ್ರಯಾಣ ಮಾಡಲು ನಾನು ಅಪ್ಪಣೆ ಕೊಟ್ಟಿದ್ದೇನೆ ಲೋಕಾಭಿ."

“ಸರಿ , ಸರಿ !”

“ಯಾಕೋ ಹೀಗನ್ನುತ್ತೀ ?”

“ನಾನು ಏನಾದರೂ ಹೇಳಿದರೆ 'ಮುಠ್ಠಾಳ' ಎನ್ನುತ್ತೀರಿ.”

“ಇಲ್ಲಯ್ಯಾ ನೀನು ಬೃಹಸ್ಪತಿ. ಹೇಳು ನಿನ್ನ ಮನಸ್ಸಿನಲ್ಲಿ ಏನಿದೆ ?”

“ನೀವು ಸಾಕಿದ ಹಕ್ಕಿ ಕೈಬಿಟ್ಟು ಹೋಯಿತು!”

“ಹೋದರೆ ಹೋಗಲಿ ಬಿಡು - ಶನಿಕಾಟವೇ ಕಳೆಯಿತು ಎಂದುಕೊಳ್ಳುತ್ತೇನೆ” ಎಂದರು.

## ೨೬

ಸಾಂಸ್ಕೃತಿಕ ನಿಯೋಗ ಗೋಷ್ಠಿಯವರು ಕಾಬೂಲ್ ಮಾರ್ಗವಾಗಿ ಮಾಸ್ಕೋ ತಲುಪಿದರು. ಏರ್‌ಪೋರ್ಟ್‌ನಲ್ಲಿ (airport) ಅವರನ್ನು ಸ್ವಾಗತಿಸಿದ ಸೋವಿಯಟ್ ಸಾಂಸ್ಕೃತಿಕ ಉಪಮಂತ್ರಿ ಉಜ್ರಾವ್ ಅವರು ಭಾರತ - ರಷ್ಯಾ ರಾಷ್ಟ್ರಗಳ ಸಾಂಸ್ಕೃತಿಕ ಬಾಂಧವ್ಯದ ಬಗ್ಗೆ ಸವಿಸ್ತಾರ ಭಾಷಣ ಮಾಡಿದರು.

ಸೋವಿಯಟ್ ಅಧಿಕಾರಿಗಳ ನೇತೃತ್ವದಲ್ಲಿ ನಿಯೋಗ ಗೋಷ್ಠಿಯವರು ರಷ್ಯಾದ ಪ್ರಧಾನ ಪಟ್ಟಣಗಳಲ್ಲಿ ನೃತ್ಯಪ್ರದರ್ಶನ ಮಾಡಿದರು. ರಷ್ಯಾದ ವಿವಿಧ ಭಾಗಗಳ ಕಲಾವಿದರು, ಕಲಾಸಂಸ್ಥೆಗಳ ಪರಿಚಯ ಮಾಡಿಕೊಂಡರು.

ಮೋಹಿನಿ, ಸ್ನೇಹಮಾಲಿನಿ ರಷ್ಯಾದ ಕೆಲವು ನರ್ತಕಿಯರಿಗೆ ಭಾರತೀಯ ನೃತ್ಯಗಳನ್ನು ಕಲಿಸಿಕೊಟ್ಟು, ಅವರಿಂದ ರಷ್ಯಾನೃತ್ಯಗಳನ್ನು ಕಲಿತುಕೊಂಡರು.

ಗೋಷ್ಠಿಯಲ್ಲಿ ಯಾರಿಗೂ ಕ್ಷಣ ಕಾಲವೂ ಪುರಸತ್ತಿಲ್ಲವಾಯಿತು. ಸತ್ಕಾರಕೂಟಗಳು, ಪ್ರದರ್ಶನಗಳು, ಫ್ಯಾಕ್ಟರಿಗಳು ಕಾರ್ಮಿಕ ಕ್ಷೇತ್ರಗಳಿಗೆ ಭೇಟಿಯಲ್ಲಿ ಆರು ವಾರಗಳು ಆರು ದಿನಗಳಂತೆ ಕಳೆದುಹೋದವು.

ಒಂದು ದಿನ ಗೋಷ್ಠಿಯ ಇತರ ಸದಸ್ಯರೊಂದಿಗೆ ಊಟಕ್ಕೆ ಕುಳಿತಿದ್ದ ಮೋಹಿನಿ,

"ನಾವು ಕಾಣುತ್ತಿರುವುದು ಕೇವಲ ವೃತ್ತಪತ್ರಿಕಾ ವರದಿಗಾರರು, ಛಾಯಾ ಚಿತ್ರಗ್ರಾಹಕರು, ಸಿಪಾಯಿಗಳು - ರಷ್ಯಾದಲ್ಲಿ ಜನರೇ ಇಲ್ಲವೇ ಧೀರಾಲಾಲ್‌ಜೀ. ನಾವು ಸೋವಿಯಟ್ ಸರ್ಕಾರದ ಅತಿಥಿಗಳೋ ಸೆರೆಯಾಳುಗಳೊ ?"

"ಏಕೆ ಹಾಗನ್ನುವಿರಿ ಮೋಹಿನಿ?"

"ಎಲ್ಲಿಗೂ ನಾವು ಸ್ವತಂತ್ರವಾಗಿ ಹೋಗುವಂತಿಲ್ಲ. ನಮಗೆ ಬೇಕಾದ ನೋಟ ನಾವು ನೋಡುವಂತಿಲ್ಲ. ಆರು ವಾರಗಳು ನಾವು ನೋಡಿದ್ದೇವೆ. ಸೋವಿಯಟ್ ಸರ್ಕಾರ ತೋರಿಸಿದ ದೃಶ್ಯಗಳನ್ನು."

"ಅದು ಹೇಗಾದರೂ ಇರಲಿ - ನಮಗೆ ಕಡಿಮೆಯಾದುದೇನು ?"

"ಸ್ವಾತಂತ್ರ್ಯ."

"ನಿಮ್ಮ ಅಭಿಪ್ರಾಯಗಳು ನಿಮ್ಮಲ್ಲಿಯೇ ಇರಲಿ. ನೀವೇನಾದರೂ ನಾಲಗೆ ಸಡಿಲ ಮಾಡಿದರೆ ನಾವು ಮದರಾಸ್ ಬದಲು ಸೈಬೀರಿಯಾ ಕಾಣಬೇಕಾಗುತ್ತದೆ."

ಭಾರತೀಯ ಸಾಂಸ್ಕೃತಿಕ ನಿಯೋಗ ಗೋಷ್ಠಿಯ ಕಾರ್ಯಕ್ರಮಗಳಿಂದ ತೃಪ್ತಿಗೊಂಡ ಸೋವಿಯಟ್ ಸರ್ಕಾರ, ಗೋಷ್ಠಿಯನ್ನು ಆಶ್ರಿತ ರಾಷ್ಟ್ರಗಳಿಗೆ ಕಳಿಸಿಕೊಡಲು ನಿರ್ಧರಿಸಿತು.

ಚೆಕೋಸ್ಲೋವಾಕಿಯಾಗೆ ಗೋಷ್ಠಿ ಪ್ರಯಾಣ ಮಾಡುವ ಮುನ್ನ ಪತ್ರಿಕಾ ಪ್ರತಿನಿಧಿಗಳನ್ನು ಎದುರಿಸಬೇಕಾಯಿತು. 'ಪ್ರಾವ್ಡಾ - ಇಜ್‌ವೆಸ್ಟಿಯಾ' ಮೊದಲಾದ ದೊಡ್ಡ ದೊಡ್ಡ ಪತ್ರಿಕೆಗಳ ಪ್ರತಿನಿಧಿಗಳಲ್ಲದೆ ನೂರಾರು, ಸಣ್ಣಪುಟ್ಟ ಪತ್ರಿಕೆಗಳ ಪ್ರತಿನಿಧಿಗಳೂ ಸೇರಿದ್ದರು.

ಪ್ರತಿನಿಧಿಗಳು ಪ್ರಶ್ನಾವಳಿ ಆರಂಭಿಸಿದರು :

'ರಷ್ಯಾ ಪ್ರವಾಸದ ಬಗ್ಗೆ ನಿಮ್ಮ ಅಭಿಪ್ರಾಯವೇನು ?'

ಗೋಷ್ಠಿಯ ಪರವಾಗಿ ಮೋಹಿನಿಯೇ ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಲಾರಂಭಿಸಿದಳು.

'ನಮ್ಮ ಪ್ರವಾಸ ತುಂಬ ಯಶಸ್ವಿಯಾಯಿತು. ಸೋವಿಯಟ್ ಸರ್ಕಾರ ಮತ್ತು ಜನತೆಯ ಹಾರ್ದಿಕ ವಿಶ್ವಾಸ, ಆದರಾತಿಥ್ಯಕ್ಕೆ ನಾವು ಋಣಿಗಳಾಗಿದ್ದೇವೆ.'

'ರಷ್ಯಾ ನೃತ್ಯಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?'

'ರಷ್ಯಾದ ಕೋಸಕ್ ನೃತ್ಯಗಳು, ಅಜ್ಜರ್‌ಬೈಜಾನಿನ ಜಾನಪದ ನೃತ್ಯಗಳು ಅತ್ಯಂತ ಸುಂದರವಾಗಿವೆ. ನಿಮ್ಮ ಜಾನಪದ ನೃತ್ಯಗಳಿಗೂ ನಮ್ಮ ರಾಜಸ್ಥಾನದ ಜಾನಪದ ನೃತ್ಯಗಳಿಗೂ ತುಂಬ ಸಾಮ್ಯವಿದೆ.'

'ಸೋವಿಯಟ್ ಜೀವನಕ್ರಮ ನಿಮಗೆ ಹೇಗನ್ನಿಸುತ್ತದೆ ?'

'ನಿಮ್ಮ ಜನರ ಜೀವನಕ್ರಮ ನೋಡಿ ನನಗೆ ಪರಮಾಶ್ಚರ್ಯ, ಆನಂದವಾಗಿದೆ. ಪ್ರತಿಯೊಬ್ಬರಲ್ಲಿಯೂ ತೃಪ್ತಿ ಕಂಡುಬರುತ್ತಿದೆ. ನಿಮ್ಮ ಸರ್ಕಾರ ಯಶಸ್ವಿಯಾಗಿ ಬಡತನವನ್ನು ತೊಡೆದುಹಾಕಿದೆ. ರಾಷ್ಟ್ರನಿರ್ಮಾಣ ತನಗೆ ಸೇರಿದ್ದೆಂದು ಪ್ರತಿಯೊಬ್ಬ ಪ್ರಜೆಯೂ ಭಾವಿಸುತ್ತಾನೆ. ನಮ್ಮ ದೇಶದ ಅನ್ನಾಭಾವ, ನಿರುದ್ಯೋಗ, ಕ್ಷಾಮಡಾಮರ ನೋಡಿದರೆ ಸೋವಿಯಟ್ ರಷ್ಯಾ ಭೂಲೋಕಸ್ವರ್ಗವೆನಿಸುತ್ತಿದೆ."

ನೂರಾರು ಕ್ಯಾಮೆರಾಗಳು ಮೋಹಿನಿಯ ಫೋಟೋಗಳನ್ನು ತೆಗೆದುಕೊಂಡವು.

ಅತಿಥಿಗಳನ್ನು ಸೋವಿಯಟ್ ಸರ್ಕಾರ ವೈಭವಯುತವಾಗಿ ಬೀಳ್ಕೊಟ್ಟಿತು.

ನಿಯೋಗ ಗೋಷ್ಠಿ ಚೆಕೋಸ್ಲೋವಾಕಿಯಾ, ಹಂಗೇರಿ, ಪೋಲೆಂಡ್ ಪ್ರವಾಸ ಮುಗಿಸಿಕೊಂಡು ವಿಯನ್ನಾಗೆ ಬಂದು ಹೋಟೆಲ್ ಅಸ್ಟೋರಿಯಾದಲ್ಲಿ ತಂಗಿದರು.

ವಿಯನ್ನಾ 'ಅಪೆರಾಹೌಸ್' ನಲ್ಲಿ (Opera House) ಮೂರು ಪ್ರದರ್ಶನಗಳಾದವು.

ನಾಲ್ಕನೆಯ ದಿನ ಬೆಳಿಗ್ಗೆ ಧೀರಾಲಾಲನ ರೂಮಿಗೆ ಬಂದ ರೂಮ್ ಬಾಯ್, ಒಂದು ಭೆಟ್ಟಿಯ ಚೀಟಿ (Visiting Card) ಅವನ ಕೈಗಿತ್ತು,

"ಇವರು ನಿಮ್ಮನ್ನ ಕಾಣಬೇಕಂತೆ" ಎಂದ.

ಭೆಟ್ಟಿಯ ಚೀಟಿಯನ್ನು ಧೀರಾಲಾಲ್ ಮೂರು ನಾಲ್ಕು ಬಾರಿ ಓದಿಕೊಂಡ.

"ಗೇಲ್ ಪ್ಯಾಟ್ರಿಕ್

ಸೆಕ್ರೆಟರಿ ಮಿ. ರೋಸಿನಿ

ಕಂಪೋಸರ್ - ಪ್ರೊಡ್ಯೂಸರ್."

'ರೋಸಿನಿಯವರ ಸೆಕ್ರೆಟರಿ ನನ್ನನ್ನೇಕೆ ನೋಡಲು ಬಂದಿದ್ದಾರೆ.'

ಎಂದು ಆಶ್ಚರ್ಯಗೊಂಡ ಧೀರಾಲಾಲ್,

"ಎಲ್ಲಿದ್ದಾರೆ?" ಎಂದು ಕೇಳಿದ.

"ಲೌಂಜ್ (Lounge) ನಲ್ಲಿ ಕುಳಿತಿದ್ದಾರೆ."

ಅವಸರವಸರವಾಗಿ ವಸ್ತ್ರಗಳನ್ನು ಧರಿಸಿದ ಧೀರಾಲಾಲ್,

"ಅವರನ್ನು ಬರಮಾಡು" ಎಂದ.

ರೂಮ್ ಬಾಯ್ ಜತೆಯಲ್ಲಿ ಬಂದ ಆಗಂತುಕ,

"ಈ ನಿಯೋಗ ಗೋಷ್ಠಿಯ ನಾಯಕರು ನೀವೇ ಏನು?" ಎಂದು ಕೇಳಿದ.

"ಹೌದು - ನನ್ನ ಹೆಸರು ಧೀರಾಲಾಲ್."

"ನೀವು ಮಿ. ರೋಸಿನಿಯವರ ಹೆಸರು ಕೇಳಿರಬಹುದು."

"ಕೇಳಿದ್ದೇನೆ. ಅವರ ಹೆಸರನ್ನು ಕೇಳದಿರುವವರು ಯಾರು?"

"ನಿಮ್ಮ ಮೂರು ಪ್ರದರ್ಶನಗಳನ್ನೂ ಮಿ. ರೋಸಿನಿ ನೋಡಿದರು - ನಿಮ್ಮನ್ನು ಕಂಡು ಮಾತನಾಡಲು ಅವರು ಅಪೇಕ್ಷಿಸುತ್ತಾರೆ."

"ಯಾವಾಗ ?"

"ಈಗ ನಿಮಗೆ ಪುರಸತ್ತಿದ್ದರೆ ಈಗಲೇ ?"

“ನಾನು ಅವರನ್ನು ಕಾಣಲು ಸಿದ್ಧವಾಗಿದ್ದೇನೆ.”

ಫೋನ್ ಕೈಗೆತ್ತಿಕೊಂಡ ಗೇಲ್ ಪ್ಯಾಟ್ರಿಕ್ ಒಂದು ನಂಬರು ಡಯಲ್ ಮಾಡಿ ಮಾತಾಡಿ,

“ಬನ್ನಿ ಹೋಗೋಣ - ರೋಸಿನಿ ನಿಮಗೆ ಕಾಯುತ್ತಿದ್ದಾರೆ” ಎಂದ.

ಅಸ್ಟೋರಿಯಾ ಹೋಟಲಿನ (Astoria Hotel) ಆರನೆಯ ಅಂತಸ್ತಿನ ಎಡಭಾಗದಲ್ಲಿದ್ದ ಕೆಲವು ರೂಮುಗಳನ್ನು ರೋಸಿನಿ ತೆಗೆದುಕೊಂಡಿದ್ದರು.

ಅವುಗಳಲ್ಲಿ ಒಂದು ಅವರ ಕಾರ್ಯಾಲಯ.

ವಿಶಾಲವಾದ ಮೇಜಿನ ಹಿಂದಿದ್ದ ತಿರುಗು ಕುರ್ಚಿಯ (Revolving chair) ಮೇಲೆ ಕುಳಿತು, ರೋಸಿರಿ ಒಂದು ದೊಡ್ಡ ಸಿಗಾರ್ ಹಚ್ಚಿ ಸೇವಿಸುತ್ತಿದ್ದರು.

ಅವರ ರೂಮಿನ ಬಳಿಗೆ ಬಂದ ಗೇಲ್ ಪ್ಯಾಟ್ರಿಕ್, ಮೆಲ್ಲನೆ ಬಾಗಿಲು ತಟ್ಟಿದ,

“ಬನ್ನಿ” ಎಂದರು ರೋಸಿನಿ.

ಧೀರಾಲಾಲ್ ಒಳಗೆ ಪ್ರವೇಶಿಸಲು ಪೀಠ ಬಿಟ್ಟೆದ್ದ ರೋಸಿನಿ, ಅವನ ಕೈ ಕುಲುಕಿ, ಕುರ್ಚಿ ತೋರಿಸಿ,

“ಕುಳಿತುಕೊಳ್ಳಿ” ಎಂದರು.

ಜಗದ್ವಿಖ್ಯಾತ ಕಲಾವಿದನ ಪರಿಚಯವಾದುದು ತನ್ನ ಜೀವನದ ಭಾಗ್ಯ ಎಂದು ಧೀರಾಲಾಲ್ ಭಾವಿಸಿದ.

ಧೀರಾಲಾಲ್ ಎದುರಿಗೆ ಕುಳಿತ ರೋಸಿನಿ,

“ನೀವು ಈ ನಿಯೋಗ ಗೋಷ್ಠಿಯ ನಾಯಕರೇ ?”

“ಹೌದು.”

“ನಿಮ್ಮ ಹೆಸರು ?”

“ಧೀರಾಲಾಲ್.”

“ನಿಮ್ಮ ಮೂರು ಪ್ರದರ್ಶನಗಳಿಗೂ ನಾನು ಬಂದಿದ್ದೆ.”

“ಹೇಗಿತ್ತು ?”

“ಚೆನ್ನಾಗಿತ್ತು - ನನಗೆ ಭಾರತೀಯ ಸಂಗೀತ ನೃತ್ಯಗಳ ಪರಿಚಯ ಇದೆ.”

“ನೀವು ಪ್ರತಿಭಾಶಾಲಿಗಳು.”

“ಅದು ಹಾಗಿರಲಿ - ನಿಮ್ಮಿಂದ ನನಗೊಂದು ಕೆಲಸವಾಗಬೇಕು.”

“ಹೇಳಿ, ಅಗತ್ಯವಾಗಿ ಮಾಡಿಕೊಡುತ್ತೇನೆ.”

“ನಿಮ್ಮ ಗೋಷ್ಠಿಯವರ ನೃತ್ಯ, ಸಂಗೀತದ ರಿಕಾರ್ಡ್ ನನಗೆ ಬೇಕು. ಇದಕ್ಕೆ ಸೂಕ್ತ ಗೌರವ ಧನ ಸಲ್ಲಿಸಲ್ಪಡುತ್ತದೆ. ನೀವು ಒಪ್ಪುವ ಹಾಗಿದ್ದರೆ ಉಳಿದ ವಿಷಯಗಳನ್ನು ನನ್ನ ಸೆಕ್ರೆಟರಿ ನಿಮ್ಮೊಂದಿಗೆ ಮಾತನಾಡುತ್ತಾರೆ.”

“ರಿಕಾರ್ಡಿಂಗ್ ಎಲ್ಲಿ ಮಾಡಿಸುತ್ತೀರಿ ?”

“ನನ್ನಲ್ಲಿ ಎಲ್ಲ ಸಲಕರಣಗಳೂ ಇವೆ - ನನ್ನ ರಿಕಾರ್ಡಿಂಗ್ ಇಂಜನಿಯರೇ ರಿಕಾರ್ಡ್ ಮಾಡಿಕೊಳ್ಳುತ್ತಾರೆ.”

“ಇವತ್ತು ನಾಳೆ ನಮ್ಮ ಪ್ರದರ್ಶನಗಳಿವೆ. ನಾಡಿದ್ದು ನೀವು ರಿಕಾರ್ಡಿಂಗ್ ಇಟ್ಟುಕೊಳ್ಳಬಹುದು.”

“ಥ್ಯಾಂಕ್ಸ್”

ಎಂದು ಮೇಲಕ್ಕೆದ್ದ ರೊಸಿನಿ,

“ಗೇಲ್, ಇವರ ಜತೆ ವ್ಯವಹಾರ ವಿಷಯ ಮಾತನಾಡಿಬಿಡು” ಎಂದರು.

ಪೀಠ ಬಿಟ್ಟು ಎದ್ದು ನಿಂತ ಧೀರಾಲಾಲ್,

“ನೀವು ನಮ್ಮ ಪ್ರದರ್ಶನ ರಿಕಾರ್ಡ್ ಮಾಡಿಕೊಳ್ಳುತ್ತಿರುವುದೇ ನಮಗೆ ದೊಡ್ಡ ಗೌರವ. ವ್ಯವಹಾರದ ಬಗ್ಗೆ ಚರ್ಚೆ ಬೇಕಿಲ್ಲ. ನೀವು ಸಂತೋಷವಾಗಿ ಕೊಟ್ಟಿದ್ದನ್ನು ನಾವು ಸ್ವೀಕರಿಸುತ್ತೇವೆ.”

ಧೀರಾಲಾಲನ ಕೈ ಕುಲುಕಿದ ರೋಸಿನಿ,

“ಮೆನಿ ಥ್ಯಾಂಕ್ಸ್” ಎಂದರು.

ಧೀರಾಲಾಲನನ್ನು ಕಳಿಸಿಕೊಟ್ಟು ಗೇಲ್ ಪ್ಯಾಟ್ರಿಕ್ ಒಳಗೆ ಬರಲು ರೋಸಿನಿ,

“ಗೇಲ್” ಎಂದರು.

“ಸರ್!”

“ನನಗೆ ಆ ಭರತನಾಟ್ಯದ ಹುಡುಗಿ ಬೇಕು”

“ಅವಳೊಬ್ಬಳನ್ನೇ ಕಂಡು ಮಾತಾಡುತ್ತೇನೆ.”

“ನಾಳೆಯೇ ಇಲ್ಲಿ ಬರುವಂತೆ ಮಾಡು”

“ಪ್ರಯತ್ನಿಸುತ್ತೇನೆ”

ಎಂದು ಗೇಲ್ ಪ್ಯಾಟ್ರಿಕ್ ಆಶ್ವಾಸನವಿತ್ತ.

ರೋಸಿನಿ ತಮ್ಮ ಬಗ್ಗೆಯೇ ಅಪಾರ ಕರುಣೆ ತಳೆದಿದ್ದರು.

ತಾವು ಯಾವದೋ ಗ್ರೀಕ್ ರುದ್ರನಾಟಕದ ನಾಯಕರು ಎಂಬ ಭಾವನೆ ಅವರ ಮನಸ್ಸಿನಲ್ಲಿ ಬೇರೂರಿತ್ತು.

ಅದಕ್ಕೆ ಸಾಕಷ್ಟು ಕಾರಣಗಳೂ ಇದ್ದವು.

ರೋಸಿನಿಯ ತಂದೆ ಇಟಾಲಿಯನ್ ದೇಶೀಯ ; ತಾಯಿ ಅಮೇರಿಕಾದವಳು.

ಮೊಚ್ಚೆಗಾರ ವೃತ್ತಿ ಕೈಗೊಂಡಿದ್ದ ದೊಡ್ಡ ರೋಸಿನಿ, ಸಂಸಾರ ನಿರ್ವಹಣದ ಸಮಸ್ತ ಜವಾಬ್ದಾರಿಯನ್ನು ಹೆಂಡತಿಯ ಮೇಲೆ ಬಿಟ್ಟಿದ್ದ. ಅವನು ಸಂಪಾದಿಸುತ್ತಿದ್ದುದು ಅವನ ಕುಡಿತಕ್ಕೆ ಸಾಲುತ್ತಿರಲಿಲ್ಲ.

ರೋಸಿನಿ, ಅವನ ತಂಗಿ ರೀಟಾಳನ್ನು ಕಟ್ಟಿಕೊಂಡು ತಾಯಿ ಹೆಣಗಾಡುತ್ತಿದ್ದಳು.

ಬಾಲ್ಯದಲ್ಲಿಯೇ ರೋಸಿನಿಯಲ್ಲಿ ಕಲಾಭಿಮಾನ ವಿಕಾಸವಾಗಿತ್ತು. ಅವನಿಗೆ ಯಾವ ಬಗೆಯ ನೆರವನ್ನೂ ಈಯಲಾರದೆ ತಾಯಿ ಪರಿತಪಿಸುತ್ತಿದ್ದಳು.

ಒಂದು ದಿನ ಕಂಠಪೂರ್ತಿ ಕುಡಿದಿದ್ದ ದೊಡ್ಡ ರೋಸಿನಿ ಬೀದಿಯಲ್ಲೇ ಬಿದ್ದು ಸತ್ತ.

ಸಂಸಾರದ ಜವಾಬ್ದಾರಿಯೂ ರೋಸಿನಿಯ ಹೆಗಲ ಮೇಲೆ ಬಿತ್ತು.

ರೋಸಿನಿ ಹಲ್ಲುಮುಡಿ ಕಚ್ಚಿಕೊಂಡು ದುಡಿದು ತಂದು ತಾಯಿ ತಂಗಿಯನ್ನು ಸಾಕುತ್ತಿದ್ದ.

ಅವನು ಕೆಲಸ ಮಾಡುತ್ತಿದ್ದ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗೆ (Departmental Stores) ಬಂದ ಒಬ್ಬ ಗಿರಾಕಿ.

"ನನಗೆ ಕೆಲವು ಪಿಟೀಲುಗಳು ಬೇಕು" ಎಂದ.

ಸ್ಟೋರ್ಸ್‌ನ ವಾದ್ಯವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ರೋಸಿನಿ, ನಾಲ್ಕಾರು ವಾದ್ಯಗಳನ್ನಾರಿಸಿ ತಂದು ಗಿರಾಕಿಯ ಮುಂದಿಟ್ಟ.

ಗಿರಾಕಿ ಒಂದು ವಾದ್ಯವನ್ನು ಶ್ರುತಿ ಮಾಡಿದ.

ರೋಸಿನಿ ಒಂದು ವಾದ್ಯವನ್ನು ಕೈಗೆತ್ತಿಕೊಂಡು ಶ್ರುತಿ ಮಾಡಿ ನುಡಿಸಿದ.

ಗಿರಾಕಿ ರೋಸಿನಿಯನ್ನೇ ನೋಡುತ್ತಾ,

"ನೀನಿಲ್ಲಿ ಕಾರಕೂನನಾಗಿದ್ದೀಯಾ?" ಎಂದು ಕೇಳಿದ.

“ಹೌದು.”

“ಪಿಟೀಲ್ ನುಡಿಸುವುದನ್ನು ನೀನೆಲ್ಲ ಕಲಿತೆ?”

“ಸ್ವಪ್ರಯತ್ನವೇ ನನ್ನ ಗುರು.”

“ಈ ಶಿಕ್ಷಣವನ್ನೇ ಏಕೆ ಮುಂದುವರಿಸಲಿಲ್ಲ ?”

“ಅನುಕೂಲವಿಲ್ಲ.”

ಎರಡು ವಾದ್ಯಗಳನ್ನಾಯ್ದುಕೊಂಡ ಗಿರಾಕಿ ತನ್ನ ಭೆಟ್ಟಿಯ ಚೀಟಿಯನ್ನು (Visiting Card) ರೋಸಿನಿ ಕೈಯಲ್ಲಿಟ್ಟು,

“ನಾಳೆ ರಾತ್ರಿ ಏಳಕ್ಕೆ ನನ್ನನ್ನು ಬಂದು ನೋಡು” ಎಂದ.

ವಿಸಿಟಿಂಗ್ ಕಾರ್ಡ್ ನೋಡಿಕೊಂಡ ರೋಸಿನಿ ಕಕ್ಕಾಬಿಕ್ಕಿಯಾಗಿ ಗಿರಾಕಿಯನ್ನೇ ನೋಡಿದ.

‘ಜಾನ್ ಸೆವೆರಿನ್(John Severin)’

ಜಾನ್ ಸೆವೆರಿನ್ ವಿಶ್ವ ವಿಖ್ಯಾತ ವಾದ್ಯಗಾರ!

ಮಾರನೆಯ ರಾತ್ರಿ ತನ್ನನ್ನು ಕಾಣಲು ಬಂದ ರೋಸಿನಿಯನ್ನು ಸೆವೆರಿನ್ ತನ್ನ ಶಿಷ್ಯನನ್ನಾಗಿ ಪರಿಗ್ರಹಿಸಿದ.

ರೋಸಿನಿಯ ಗ್ರಹಗತಿ ಒಮ್ಮೆಲೇ ಬದಲಾಯಿಸಿತು.

ಮೂರು ವರ್ಷಗಳು ಕಳೆದ ಮೇಲೆ ರೋಸಿನಿ ’ಮೆಟ್ರೊಪಾಲಿಟನ್ ಆಪೆರಾ ಹೌಸ್’ನಲ್ಲಿ ತನ್ನ ಪ್ರಥಮ ಪ್ರದರ್ಶನವಿತ್ತು ಖ್ಯಾತಿ ಗಳಿಸಿದ.

ಖ್ಯಾತಿಯೊಂದಿಗೆ ರೋಸಿನಿಗೆ ಧನವೂ ಶೇಖರವಾಯಿತು.

ಅವನು ಇಟಾಲಿಯನ್ ಕ್ವಾರ್ಟರಿನ (Itlaian quarter) ಹೊಲಸು ಕೂಪದಲ್ಲಿ ವಾಸಿಸಬೇಕಾಗಿರಲಿಲ್ಲ,

ಭವ್ಯವಾದ ಬಂಗಲೆ, ಆಳು ಕಾಳುಗಳು, ಎರಡು ಕಾರುಗಳು ಕೊಂಡು ತನ್ನ ನೂತನ ಭವನದಲ್ಲಿ ತಾಯಿ, ತಂಗಿಯನ್ನು ಪ್ರತಿಷ್ಠಿಸಿದ.

ಕೆಲಕಾಲದಲ್ಲಿಯೇ ರೋಸಿನಿಗೆ ಮೆಟ್ರೋಪಾಲಿಟನ್ ಆಪೆರಾ ಕಂಪೆನಿಯ ಡೈರೆಕ್ಟರ್ ಪದವಿಯೂ ದೊರೆಯಿತು.

ಆಪೆರಾ ಕಂಪೆನಿಯ ಪ್ರೈಮಡೋನಾ[1] ಆಗಿದ್ದ ಇರೀನಾಳನ್ನು (Irina) ರೋಸಿನಿ ಮೋಹಿಸಿ ಲಗ್ನವಾದ.

ಒಂದು ವರ್ಷ ಅವರ ದಾಂಪತ್ಯ ಜೀವನ ಸುಮುಖವಾಗಿ ಸಾಗಿತು.

ವರ್ಷ ಅದೇ ಕಳೆದಿದೆ.

ಇರೀನಾ ಒಬ್ಬ ಕೋಟ್ಯಾಧೀಶ್ವರನನ್ನು ಲಗ್ನವಾಗಲಿಚ್ಛಿಸಿ ದಾಂಪತ್ಯ ವಿಚ್ಛೇದನಕ್ಕೆ ಅರ್ಜಿ ಹಾಕಿದಳು.

ದಾಂಪತ್ಯ ವಿಚ್ಛೇದನಕ್ಕೆ ಸಮ್ಮತಿಸುವುದು ರೋಸಿನಿಗೆ ಅನಿವಾರ್ಯವಾಯಿತು.

ಅಲ್ಲಿಂದ ಅವನ ಜೀವನ ಚಿತ್ರವಿಚಿತ್ರ ರೂಪು ತಳೆಯಲಾರಂಭಿಸಿತು.

ಅಮೇರಿಕಾದ ಪತ್ರಿಕೆಗಳಲ್ಲಿ ಪ್ರತಿದಿನ ರೋಸಿನಿಯ ಬಗ್ಗೆ ಏನಾದರೊಂದು ವಿಶೇಷ ಸುದ್ದಿ ಪ್ರಕಟವಾಗುತ್ತಿತ್ತು.

ಅವನು ಪ್ರದರ್ಶಿಸಿದ ಸ್ವಯಂ ರಚಿತ ಗೇಯನಾಟಕ 'ಮುರಿದುಬಿದ್ದ ಹೃದಯ (Broken Heart)' ಇಡಿಯ ಅಮೇರಿಕೆಯ ಕಲಾಪ್ರಪಂಚವನ್ನು ಅಲ್ಲಕಲ್ಲೋಲ ಮಾಡಿತು.

ಹಾಲಿವುಡ್ಡಿನ ಚಿತ್ರ ನಿರ್ಮಾತೃರು ರೋಸಿನಿಯ ಮನೆಯ ಮುಂದೆ 'ಕ್ಯೂ' ನಿಲ್ಲಲಾರಂಭಿಸಿದರು.

ರೋಸಿನಿಯ ಕಲಾವಿದಸ್ಥಿತೆಯಷ್ಟೇ ಅವನ ಪ್ರಣಯ ಪ್ರಸಂಗಗಳು ಪ್ರಸಿದ್ಧವಾದವು.

ಇರೀನಾ ಪ್ರಕರಣ ಮುಗಿದ ಮೇಲೆ ರೋಸಿನಿ ಐದು ಬಾರಿ ಲಗ್ನವಾಗಿ - ಎಲ್ಲರನ್ನೂ ಡೈವೋರ್ಸ್ ಮಾಡಿದ್ದ.

ದಾಂಪತ್ಯ ವಿಚ್ಛೇದನ ಪಡೆದಷ್ಟೂ ಅವನ ಕೀರ್ತಿ ವಿಸ್ತರಿಸಲಾರಂಭಿಸಿತು.

ಕೀರ್ತಿ – ಪ್ರಸಾರ - ಪತ್ರಿಕೆಗಳಲ್ಲಿ ತನ್ನ ಬಗ್ಗೆ ಬರುತ್ತಿದ್ದ ಹೊಲಸು ಸುದ್ದಿಗಳು ಎಲ್ಲವನ್ನೂ ಕಂಡು ಬೇಸತ್ತ ರೋಸಿನಿ ತನ್ನ ಕಾರ್ಯದರ್ಶಿ ಗೇಲ್ ಪ್ಯಾಟ್ರಿಕ್‌ನೊಂದಿಗೆ ಪ್ರಾಚ್ಯ ದೇಶಗಳ ಸಂಚಾರಕ್ಕೆ ತೆರಳಿದ.

ಭಾರತ – ಜಪಾನ್ - ಚೀಣ - ಕಾಂಬೋಡಿಯಾ - ಜಾವಾ – ಸುಮಾತ್ರಾ ದೇಶಗಳ ಸಂಗೀತ, ನೃತ್ಯಗಳನ್ನು ಆಳವಾಗಿ ಅಭ್ಯಾಸಿಸಿದ ರೋಸಿನಿ ಒಂದು ಮಹಾ ನಿರ್ಧಾರಕ್ಕೆ ಬಂದ.

[1] ಪ್ರಧಾನ ನಾಯಕಿ.

’ಸಂಗೀತದ ಭದ್ರಬುನಾದಿ ಇರುವುದು ಪ್ರಾಚ್ಯ ದೇಶಗಳಲ್ಲಿ - ಅದರಲ್ಲಿಯೂ ಭಾರತದಲ್ಲಿ,

ಐರೋಪ್ಯ ಸಂಗೀತವೆಲ್ಲಾ ಭಾರತೀಯ ಸಂಗೀತದ ಒಂದು ಅಧ್ಯಾಯ ಅಷ್ಟೇ !

ಪ್ರಾಚ್ಯ - ಪಾಶ್ಚಾತ್ಯ ಸಂಗೀತಗಳ ಸಾಮರಸ್ಯ ಸಾಧಿಸಬೇಕು.

ವಿಶ್ವದ ಸಂಗೀತವೆಲ್ಲಾ ಒಂದು ಎಂಬ ಸಿದ್ಧಾಂತ ಸ್ಥಾಪಿಸಬೇಕು.’

ಎಂದು ನಿಶ್ಚಯಿಸಿದ ರೋಸಿನಿ, ಭಾರತೀಯ ಜನಪದ ಕಥೆಯನ್ನಾಯ್ದುಕೊಂಡು, ಅದಕ್ಕೆ ಸಂಗೀತ ಅಳವಡಿಸಲು ಆರಂಭಿಸಿದ.

ವಿಯನ್ನಾದಲ್ಲಿ ಸಾವಕಾಶವಾಗಿ ಕುಳಿತು ತನ್ನ ಸಿನಾರಿಯೋ ಸಿದ್ಧಪಡಿಸಿಕೊಂಡು, ಹಾಲಿವುಡ್ಡಿಗೆ ಹೋಗಬೇಕೆನ್ನುವುದೇ ಅವನ ಯೋಚನೆಯಾಗಿತ್ತು.

ವಿಯನ್ನಾದಲ್ಲಿ ಅವನು ನೋಡಿದ ಭಾರತೀಯ ನೃತ್ಯಪ್ರದರ್ಶನ ಅವನ ಭಾವನೆ, ಚಿಂತನೆಗೆ ಪುಟಗೊಟ್ಟಿದ್ದವು.

# ೨೮

ವಿಸ್ಕಿ ಬಾಟಲಿಗೆ ಕೈ ಹಾಕಿದಾಗಲೆಲ್ಲಾ ರೋಸಿನಿ ಅವರ ಮನಸ್ಸಿನಲ್ಲಿ,

'ನಮ್ಮಪ್ಪನಿಂದ ನನಗೆ ಬಂದಿರುವ ಬಳುವಳಿ ಇದೊಂದೇ !'

ಎಂಬ ಭಾವನೆ ಹೊಳೆಯುತ್ತಿತ್ತು.

ವಿಸ್ಕಿಯಿಂದಲೇ ರೋಸಿನಿಗೆ ಬೆಳಗಾಗಬೇಕು !

ವಿಸ್ಕಿಯಿಂದಲೇ ಅವರಿಗೆ ರಾತ್ರಿಯಾಗಬೇಕು ! !

ಸಿಗಾರ್ ಹಚ್ಚಿಕೊಂಡು, ವಿಸ್ಕಿ ಸೇವಿಸುತ್ತಾ, ವಿಚಾರಪರವಶರಾಗಿ ರೋಸಿನಿ ತಮ್ಮ ರೂಮಿನಲ್ಲಿ ಕುಳಿತಿರಲು, ಯಾರೋ ಬಾಗಿಲು ತಟ್ಟಿದರು.

"ಯಾರು ?" ಎಂದರು ರೋಸಿನಿ.

"ನಾನು ಬಾಸ್ (Boss) - ಗೇಲ್."

"ಬಾ - ಗೇಲ್."

ಮೋಹಿನಿಯೊಂದಿಗೆ ಒಳಗೆ ಪ್ರವೇಶಿಸಿದ ಗೇಲ್ ಪ್ಯಾಟ್ರಿಕ್,

"ಮಿಸ್ ಮೋಹಿನಿ" ಎಂದ.

ಕುಳಿತಿದ್ದೆಡೆಯೇ ಕೈನೀಡಿದ ರೋಸಿನಿ,

"ಕಮ್ ಮೈಡಿಯರ್ - ಐ ಹ್ಯಾವ್ ಬೀನ್ ವೆಯ್ಟಿಂಗ್ ಫಾರ್ ಯು (Come my dear, I have been waiting for you)" ಎಂದರು.

ಅವರ ಕೈ ಕುಲುಕುತ್ತ ಮೋಹಿನಿ,

"ಥ್ಯಾಂಕ್ ಯು ಸರ್ (Thank you Sir,)"

ಎಂದು ಅವನ ಮುಂದೆ ಕುಳಿತಳು.

ಗೇಲ್ ಪ್ಯಾಟ್ರಿಕ್ ಬಾಗಿಲು ಎಳೆದುಕೊಂಡು ಹೊರಟು ಹೋದ.

ಇನ್ನೊಂದು ಗ್ಲಾಸಿಗೆ ಸ್ವಲ್ಪ ವಿಸ್ಕಿ ಬಗ್ಗಿಸಿದ ರೋಸಿನಿ,

"ಹ್ಯಾವ್ ಎ ಲಿಟ್ಲ್ ಡ್ರಿಂಕ್ (Have a little drink)" ಎಂದರು.

ಮೋಹಿನಿ ಕೈಗೆ ಗ್ಲಾಸ್ ಎತ್ತಿಕೊಂಡಳು.

ಮೋಹಿನಿ, ರೋಸಿನಿ ಇಬ್ಬರೂ ಪರಸ್ಪರ ಪರೀಕ್ಷೆಯಲ್ಲಿ ಉದ್ಯುಕ್ತರಾದರು.

ಸ್ವಭಾವಜನ್ಯ ಸುಂದರಿಯಾದ ಮೋಹಿನಿ, ಅಂದು ಧರಿಸಿದ್ದ ನೀಲಿ ಜಾರ್ಜೆಟ್ ಸೀರೆಯಲ್ಲಿ ಮತ್ತಷ್ಟು ಸುಂದರಿಯಾಗಿ ಕಾಣಾತ್ತಿದ್ದಳು. ಅವಳು ಧರಿಸಿದ್ದ ನೈಲಾನ್ ಕುಪ್ಪಸವನ್ನು ಭೇದಿಸಿಕೊಂಡು ಸ್ತನಚೂಚುಕಗಳು ಕಾಣುತ್ತಿದ್ದವು. ಹಾಲುಕೆನೆಯಂಥ ಅವಳ ಮುಖವರ್ಣ ಮೋಹಕವಾಗಿತ್ತು.

ರೋಸಿನಿಯ ರೋಮರಹಿತ ಗೋಳದಂಧ ತಲೆ ಮಿರ್ರನೆ ಮಿಂಚುತ್ತಿತ್ತು.

ರೋಸಿನಿಯವರು ಸ್ಥೂಲಕಾಯ- ಆರು ಅಡಿ ಎತ್ತರದ ನಿಲುವು.

ಅವರ ಗುಂಡುಮುಖದ ಮೇಲಿದ್ದ ಮೂಗು ಚಪ್ಪಟೆ ಕೆಳದುಟಿ ಇಳಿಬಿದ್ದಿತ್ತು.

ಆದರೆ ಅವರ ಪ್ರಖರ ಕಣ್ಣುಗಳು ದೇಹದ ಎಲ್ಲ ಓರೆಕೋರೆಗಳನ್ನೂ ಮರೆಸಿದ್ದವು.

ನಿರರ್ಗಳವಾಗಿ ವಿಸ್ಕಿ ಸೇವಿಸುತ್ತಾ ರೋಸಿನಿ,

"ನಿಮ್ಮ ಪ್ರದರ್ಶನಗಳನ್ನು ನೋಡಿ ನನಗೆ ತುಂಬ ಸಂತೋಷವಾಯಿತು."

"ಧನ್ಯಳಾದೆ, ತಮ್ಮಂಥ ಕಲಾವಿದರ ಮೆಚ್ಚುಗೆ ದೊರೆತದ್ದು ನನ್ನ ಪುಣ್ಯವಿಶೇಷ."

"ನಿಮ್ಮ ಮುಂದಿನ ಕಾರ್ಯಕ್ರಮವೇನು ?"

"ಇಲ್ಲಿ ಇನ್ನು ಮೂರು ದಿನಗಳಿದ್ದು ರೋಮ್ ಮಾರ್ಗವಾಗಿ ಇಂಡಿಯಾಗೆ ಹೋಗುತ್ತೇವೆ."

"ನಾನೊಂದು ಕೆಲಸಕ್ಕೆ ಕೈ ಹಚ್ಚಿದ್ದೇನೆ. ಅದಕ್ಕೆ ನಿಮ್ಮ ಸಹಕಾರ ಬೇಕು."

"ಏನದು ?"

"ನಿಮ್ಮ ದೇಶದ ಒಂದು ಜನಪದಕಥೆಯನ್ನು ಚಿತ್ರಮಾಡಬೇಕೆಂದಿದ್ದೇನೆ. ಚಿತ್ರದಲ್ಲಿ ಭಾರತೀಯ ಸಂಗೀತ, ನೃತ್ಯ ಅಳವಡಿಸಬೇಕೆಂದಿದ್ದೇನೆ. ಅದಕ್ಕೇ ನಾನು ನಿಮ್ಮ ಪ್ರದರ್ಶನಗಳ ರಿಕಾರ್ಡ್ ಬಯಸಿದ್ದು."

"ನಮ್ಮ ದೇಶದ ಜನಪದ ಕಥೆಯೇ ?"

"ಹೌದು. ರಾಜಕುಮಾರ, ರಾಜಕುಮಾರಿಯ ಕಥೆ - ಮಧ್ಯೆ ಒಬ್ಬ ರಾಕ್ಷಸ ಬರುತ್ತಾನೆ. ಶುದ್ಧ ಪ್ರೇಮಕ್ಕೆ ಅಂತಿಮ ಜಯ ಸಿದ್ಧವೆನ್ನುವುದೇ ವಸ್ತು. ಕಥೆ ಚಿರಪರಿಚಿತವಾದುದು - ತಂತ್ರಭಾಗ, ಸಂಗೀತ ನೃತ್ಯಗಳೆಲ್ಲವೂ ಹೊಸದು."

"ನಿಮ್ಮ ಯೋಜನೆ ಅಮೋಘವಾದುದು. ಭಾರತದ ಕೀರ್ತಿ ವಿಸ್ತರಣಕ್ಕೆ ನಿಮ್ಮ ಚಿತ್ರ ತುಂಬ ನೆರವಾಗುತ್ತದೆ."

“ಈ ಚಿತ್ರ ನನ್ನ ಮ್ಯಾಗ್ನಂ ಓಪಸ್ (Magnum opus) - ಹಾಲಿವುಡ್ಡಿನ ಚಿತ್ರಮುಖವನ್ನೇ ನನ್ನ ಚಿತ್ರ ಬದಲಿಸುತ್ತದೆಂಬ ನಂಬಿಕೆ ನನಗಿದೆ.”

“ಸಿದ್ಧಹಸ್ತರಾದ ನೀವು ಏನು ಮುಟ್ಟಿದರೂ ಅದು ಚಿನ್ನವಾಗುತ್ತದೆ.”

“ಈಗ ನಾನು ಚಿನ್ನ ಮುಟ್ಟಿ ಆದನ್ನು ಅಪರಂಜಿ ಮಾಡಲು ಬಯಸುತ್ತಿದ್ದೇನೆ.”

“ಯಾವದು ನಿಮ್ಮ ಚಿನ್ನ.”

“ನೀವು.”

“ನನ್ನ ಕರ್ತವ್ಯಭಾಗವೇನು?”

“ನೀವೇ ಚಿತ್ರದ ಕಥಾನಾಯಿಕೆ”

ಮೋಹಿನಿಗೆ ರೋಮಾಂಚವುಂಟಾಯಿತು.

’ಫಿಲ್ಮ್ ಇಂಡಿಯಾ - ಫಿಲ್ಮ್ ಫೇರ್ - ಮೂವಿ ಮಿರರ್ ಪತ್ರಿಕೆಗಳಲ್ಲಿ ನಾನು ನೋಡುತ್ತಿದ್ದ ಈಸ್ತರ್ ವಿಲಿಯಮ್ಸ್, ರೀಟಾ ಹೇವರ್ತ್, ಜೀನ್ ಸಿಮ್ಮನ್ಸ್, ಮರ್ಲೀನ್ ಮನ್‌ರೋ, ನಾರ್ಮಾ ಷೆರಿಯರ್ ಇವರ ಜತೆ ನಾನು ನಿಲ್ಲುತ್ತೇನೆ.

ಬಾಲ್ಯದ ಕನಸು ಇಂದು ನನಸಾಗುತ್ತದೆಯೇ?’

“ಏನು ಹೇಳುವಿರಿ ಮಿಸ್ ಮೋಹಿನಿ ?”

“ಗೋಷ್ಠಿಯಿಂದ ನಾನು ಹೊರಗೆ ಬರಬೇಕಾಗುತ್ತದೆ.”

“ಹೌದು.”

“ವೀಸಾಗೆ (Visa) ಏನು ಮಾಡುವಿರಿ ?”

“ಅದೆಲ್ಲಾ ನನಗಿರಲಿ. ರೋಸಿನಿ ಹೆಸರಿಗೆ ಸ್ವಲ್ಪ ಬೆಲೆಯಿದೆ.”

“ಹಾಲಿವುಡ್‌ಗೆ ಯಾವಾಗ ಹೋಗಬೇಕು.”

“ಕೂಡಲೆ ಹೊರಡಬೇಕು.”

“ನಿಮ್ಮ ಚಿತ್ರ ಎಷ್ಟು ದಿನಗಳಲ್ಲಿ ಮುಗಿಯುತ್ತದೆ ?”

“ಒಂದೆರಡು ವರ್ಷಗಳಾಗಬಹುದು. ಲಹರಿ ಬಂದಲ್ಲದೆ ನಾನು ಕೆಲಸ ಮಾಡುವುದಿಲ್ಲ.”

“ನಿಮ್ಮ ಚಿತ್ರದಲ್ಲಿ ಭಾಗವಹಿಸಲು ನನಗೂ ಅಪೇಕ್ಷೆಯಿದೆ. ಈಗ ಗೋಷ್ಠಿಯೊಂದಿಗೆ ಊರಿಗೆ ಹಿಂದಿರುಗಿ, ನೇರವಾಗಿ ಹಾಲಿವುಡ್ಡಿಗೆ ಬರುತ್ತೇನೆ.”

"ಅದು ಆಗದ ಮಾತು. ನೀವೇ ನನ್ನ ಸ್ಫೂರ್ತಿ - ನೀವು ನನ್ನ ಜತೆಯಿರಬೇಕು."

"ನಾಳೆಯವರೆಗೆ ಅವಕಾಶ ಕೊಡಿ - ನಾಳೆ ನನ್ನ ಅಂತಿಮ ನಿರ್ಧಾರ ತಿಳಿಸುತ್ತೇನೆ"

"ನಿಮ್ಮ ಅಂತಿಮ ನಿರ್ಧಾರ ನನ್ನ ಪರವಾಗಿರಬೇಕು"

"ಇರುತ್ತದೆ."

"ಥ್ಯಾಂಕ್ಸ್"

ಎಂದು ನುಡಿದ ರೋಸಿನಿ, ಅವಳ ಗ್ಲಾಸಿಗೆ ಸ್ವಲ್ಪ ಮದ್ಯ ಹಾಕಿ, ತನ್ನ ಗ್ಲಾಸ್ ಭರ್ತಿ ಮಾಡಿಕೊಂಡು,

"ನನ್ನ ವಿಷಯ ಒಂದೆರಡು ವಿಷಯ ತಿಳಿಸುತ್ತೇನೆ. ಸಾವಕಾಶವಾಗಿ ಯೋಚಿಸಿ - ಅವಸರ ನಿರ್ಧಾರ ಕೈಗೊಂಡು, ಸಾವಕಾಶವಾಗಿ ಪಶ್ಚಾತ್ತಾಪ ಪಡುವುದು ಬೇಡ."

"ಹೇಳಿ."

"ನನ್ನ ಜತೆ ಏಗುವುದು ಕಷ್ಟ."

"ಏಕೆ ?"

"ನನ್ನಲ್ಲಿ ಯಾವದೋ ಒಂದು ಭೂತ ಸೇರಿಕೊಂಡಿದೆ. ಅದು ನನ್ನನ್ನು ಚಿತ್ರವಿಚಿತ್ರವಾಗಿ ಆಡಿಸುತ್ತದೆ. ನಾನು ಸೆಟ್ ಪ್ರವೇಶಿಸಿದರೆ ಎರಡು, ಮೂರು ದಿನ ಸತತವಾಗಿ ಕೆಲಸ ಮಾಡುತ್ತೇನೆ. ಮನಸ್ಸು ಬರದಿದ್ದರೆ ತಿಂಗಳುಗಟ್ಟಲೆ ಸೆಟ್ ಕಡೆ ಸುಳಿಯುವುದಿಲ್ಲ."

"…………."

"ನನ್ನ ಚರಿತ್ರೆ ಕೇಳಿದ್ದೀರಾ ?"

"ಅಲ್ಪಸ್ವಲ್ಪ ಕೇಳಿದ್ದೇನೆ."

"ಇದುವರೆಗೆ ನನಗೆ ಆರು ಡೈವೋರ್ಸ್ (Divorce) ಆಗಿದೆ."

ಮೋಹಿನಿ ನಕ್ಕು,

"ಏಕೆ ಹಾಗಾಯಿತು?"

"ನನ್ನೊಂದಿಗೆ ಯಾರೂ ಏಗುವುದಿಲ್ಲ."

"ನಾನು ಏಗಬಲ್ಲೆ."

"ಪ್ರಯತ್ನಿಸಿ ನೋಡಿ."

ಗ್ಲಾಸ್ ಮುಗಿಸಿ ಮೇಜಿನ ಮೇಲಿಟ್ಟ ಮೋಹಿನಿ ಎದ್ದು

“ನಾಳೆ ಕಾಣುತ್ತೇನೆ, ಈಗ ನನಗೊಂದು ರಿಹರ್ಸಲ್ ಇದೆ” ಎಂದು ಹೇಳಿ ಹೋದಳು.

## ೨೯

'ನನ್ನ ಭವಿಷ್ಯ ಇರುವುದು ರೋಸಿನಿ ಅವರ ಕೈಯಲ್ಲಿ.'

'ಈ ಅವಕಾಶ ಕಳೆದುಕೊಂಡರೆ, ಪುನಃ ಇಂಥ ಅವಕಾಶ ಸಿಕ್ಕುವುದಿಲ್ಲ.'

ಎಂದುಕೊಂಡೇ ಲಿಫ್ಟ್‌ನಲ್ಲಿ ಕೆಳಗಿಳಿದು ಹೋದ ಮೋಹಿನಿ ತನ್ನ ಬಿಡದಿ ಸೇರಿದಳು.

ಅವಳನ್ನೇ ಹುಡುಕುತ್ತಿದ್ದ ಧೀರಾಲಾಲ್,

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದಿರಿ ಮೋಹಿನಿ"

ಎಂದು ಕೇಳಿದ.

"ನನ್ನ ಆರೋಗ್ಯ ಚೆನ್ನಾಗಿಲ್ಲ ಎಂದು ಹೇಳಿರಲಿಲ್ಲವೇ – ಡಾ. ವಾರ್ನಾಫ್ ಅವರನ್ನು ಕಂಡು ಬರಲು ಹೋಗಿದ್ದೆ."

"ಡಾಕ್ಟರು ಸಿಕ್ಕಿದ್ದರೇ?"

"ಸಿಕ್ಕಿದ್ದರು."

"ಏನು ಹೇಳಿದರು."

"ಇನ್ನೂ ಮೂರು ನಾಲ್ಕು ಟೆಸ್ಟ್ (Test)ಗಳಾಗಬೇಕಂತೆ – ನಾಳೆ ರಕ್ತ ತೆಗೆದುಕೊಳ್ಳುತ್ತಾರಂತೆ!"

"ಈ ಪರೀಕ್ಷೆಗಳು ಮುಗಿಯುವುದು ಯಾವಾಗ ಮೋಹಿನಿ ?"

"ನಾಲ್ಕೈದು ದಿವಸಗಳಾಗತ್ತೆ ಎಂದು ಡಾಕ್ಟರು ಹೇಳಿದರು."

"ಹತ್ತನೆಯ ತಾರೀಖು ರೋಮಿನಲ್ಲಿ ಪ್ರದರ್ಶನ ಏರ್ಪಾಟಾಗಿದೆ. ಅಲ್ಲಿಯವರೆಗೆ ನಾವು ಇಲ್ಲಿ ಕೂಡಲಾಗುವುದೇ ?"

"ನೀವು ಯಾವಾಗ ಹೊರಡಬೇಕೆಂದಿರುವಿರಿ."

"ಇವತ್ತು-ನಾಳೆ ರಿಕಾರ್ಡಿಂಗ್ ಇದೆ ನಾಡಿದ್ದು ಹೊರಡಬಹುದು."

"ನೀವು ನಾಡಿದ್ದು ಹೊರಟುಬಿಡಿ - ನಾನು ಡಾಕ್ಟರ ಪರೀಕ್ಷೆ ಮುಗಿಸಿಕೊಂಡು ನಿಮ್ಮನ್ನು ರೋಮಿನಲ್ಲಿ ಸೇರುತ್ತೇನೆ."

"ಮೊದಲನೆಯ ಪ್ರದರ್ಶನಕ್ಕೆ ನೀವಿಲ್ಲದಿದ್ದರೆ...?"

"ಹತ್ತನೆಯ ತಾರೀಖು ನಾನು ರೋಮಿಗೆ ಬರುತ್ತೇನೆ. ಮೊದಲನೆಯ ಪ್ರದರ್ಶನ ನಾನು ತಪ್ಪಿಸಿಕೊಳ್ಳುತ್ತೇನೆಯೇ ?"

"ನೀವೊಬ್ಬರೇ ಇಲ್ಲಿರುವಿರಾ ?"

"ನನಗೇನು ಭಯ?"

"ನಾಳೆ ಸಂಬಂಧಂ ಆಕ್ಷೇಪಿಸಿದರೆ ಏನು ಹೇಳಲಿ ?"

"ನೀವು ಏನೂ ಹೇಳಬೇಡಿ - ನಾನು ಅವರಿಗೆ ಉತ್ತರ ಹೇಳುತ್ತೇನೆ."

"ಮೊದಲನೆಯ ಪ್ರದರ್ಶನಕ್ಕೆ ನೀವು ಬರದಿದ್ದರೆ ನಾನು ರಂಗದ ಮೇಲೆ ಬರುವಂತಿಲ್ಲ."

"ಅದು ನನಗೆ ಗೊತ್ತಿಲ್ಲವೇ ಧೀರಾಲಾಲ್‌ಜೀ. ನಿಮ್ಮನ್ನು ನಾನು ಪೇಚಾಟಕ್ಕೆ ಸಿಕ್ಕಿಸುತ್ತೇನೆಯೇ ? - ರಿಕಾರ್ಡಿಂಗ್ ನಾಳೆ ಮುಗಿಯುತ್ತದೆಯೇ?"

"ಮುಗಿಸುತ್ತೇನೆ ಎಂದು ಗೇಲ್ ಪ್ಯಾಟ್ರಿಕ್ ಹೇಳಿದರು."

"ಅವರೊಂದಿಗೆ ವ್ಯವಹಾರ ಭಾಗ ಮುಗಿಸಿದಿರಾ ?"

"ಮುಗಿಸಿದೆ. ಒಟ್ಟು ಮೂರು ಸಾವಿರ ಪೌಂಡು ಕೊಡುವುದಕ್ಕೆ ಗೇಲ್ ಪ್ಯಾಟ್ರಿಕ್ ಒಪ್ಪಿಕೊಂಡರು. ಎಲ್ಲರಿಗೂ ಇನ್ನೂರೈವತ್ತು ಪೌಂಡು ಬರುತ್ತದೆ."

"ಈ ವಿಷಯ ನೀವು ಸಂಬಂಧಂ ಅವರಿಗೆ ತಿಳಿಸಬೇಡಿ. ಹಣ ಪಾರ್ಟಿ ಫಂಡಿಗೆ ಕೊಡಿ ಎಂದವರು ಕೇಳುತ್ತಾರೆ."

"ನಾನು ಏಕೆ ಹೇಳಲಿ." ಎಂದ.

ಮಾರನೆಯ ದಿನ ಮಧ್ಯಾಹ್ನದ ವೇಳೆಗೆ ಗೇಲ್ ಪ್ಯಾಟ್ರಿಕ್ ರಿಕಾರ್ಡಿಂಗ್ ಮುಗಿಸಿ, ಮೂರು ಸಾವಿರ ಪೌಂಡು ಗೌರವಧನವನ್ನು ಧೀರಾಲಾಲನ ಕೈಗಿತ್ತರು. ಧೀರಾಲಾಲ್ ಚೆಕ್ ಮುರಿಸಿ, ಎಲ್ಲ ಕಲಾವಿದರಿಗೂ ಇನ್ನೂರೈವತ್ತು ಪೌಂಡು ಪಾವತಿ ಮಾಡಿಬಿಟ್ಟ.

ಮೂರನೆಯ ಬೆಳಿಗ್ಗೆ ನಿಯೋಗ ಗೋಷ್ಠಿಯವರು ಪ್ಲೇನಿನಲ್ಲಿ ರೋಂ ನಗರಕ್ಕೆ ಪ್ರಯಾಣ ಬೆಳಸಿದರು.

ಗೋಷ್ಠಿ 'ಗ್ರ್ಯಾಂಡ್ ಹೋಟೆಲ್' ಬಿಟ್ಟು ಹೋದ ಕೂಡಲೆ ಮೋಹಿನಿ ಫೋನ್ ಎತ್ತಿಕೊಂಡು ರೋಸಿನಿಯವರ ನಂಬರ್ ಡಯಲ್ ಮಾಡಿದರು.

ಅತ್ತಕಡೆಯಿಂದ ಧ್ವನಿ ಬಂದಿತು.

"ಹೆಲೋ - ಯಾರು?"

“ಮಿಸ್. ಮೋಹಿನಿ.”

“ಗುಡ್ ಮಾರ್ನಿಂಗ್ ಮ್ಯಾಡಾಂ - ಗೇಲ್ ಪ್ಯಾಟ್ರಿಕ್ ಮಾತಾಡುತ್ತಿರುವುದು.”

“ರೋಸಿನಿ ಅವರನ್ನು ಫೋನ್ ಬಳಿ ಕರೆಯುವಿರಾ ?”

“ಕರೆಯುತ್ತೇನೆ - ರಿಸೀವರ್ ಹಾಗೇ ಹಿಡಿದುಕೊಂಡಿರಿ.”

ಎರಡು ನಿಮಿಷಗಳ ತರುವಾಯ ಬೇರೊಂದು ಧ್ವನಿ ಬಂದಿತು.

“ಹೆಲೋ ಮಿಸ್. ಮೋಹಿನಿ.”

“ನಮ್ಮ ಪಾರ್ಟಿ ಬೆಳಿಗ್ಗೆ ರೋಮಿಗೆ ಪ್ರಯಾಣ ಮಾಡಿದರು ಮಿ. ರೋಸಿನಿ.”

“ವೆರಿ ಗುಡ್ (Very good) - ರೂಮಿನಲ್ಲಿ ನೀವೊಬ್ಬರೇ ಏನು ಮಾಡುತ್ತಿರುವಿರಿ ?”

“ಏನೂ ಇಲ್ಲ.”

“ಇಲ್ಲಿಗೇ ಬಂದುಬಿಡಿ - ನಿಮ್ಮ ಸಾಮಾನುಸಹಿತ. ನನ್ನ ರೂಮುಗಳಲ್ಲಿ ಒಂದನ್ನು ಬಿಡಿಸಿಕೊಡುತ್ತೇನೆ. ಗೇಲ್‌ನನ್ನು ಕಳಿಸಿಕೊಡುತ್ತೇನೆ –”

“ಕಳಿಸಿಕೊಡಿ _ ಅವರ ಜತೆ ಬರುತ್ತೇನೆ.”

“ಗುಡ್ ಡೇ - ಡಿಯರ್.”

“ಗುಡ್ ಡೇ - ಮಿ. ರೋಸಿನಿ.”

ಬೆಲ್‌ಮಾಡಿ ಗೇಲ್ ಪ್ಯಾಟ್ರಿಕ್‌ನನ್ನು ಬರಮಾಡಿಕೊಂಡ ರೋಸಿನಿ,

“ಗೇಲ್….”

“ಎಸ್ ಸರ್. (Yes Sir.)”

“ಮಿಸ್. ಮೋಹಿನಿಯವರನ್ನು ಇಲ್ಲಿಗೇ ಕರೆದುಕೊಂಡು ಬನ್ನಿ – ನನ್ನ ರೂಮಿನ ಪಕ್ಕದ ರೂಮು ಅವರಿಗೆ ಕೊಡಿ. ಅವರ ಬಾಬ್ತು ಬಿಲ್ ಏನಾದರೂ ಇದ್ದರೆ ಪಾವತಿ ಮಾಡಿಬಿಡಿ.”

“ಆಗಬಹುದು ಸರ್.”

“ವೀಸಾ (Visa) ವಿಷಯವೇನಾಯಿತು ?”

“ಎಲ್ಲಾ ವ್ಯವಸ್ಥೆ ಮಾಡಿದ್ದೇನೆ - ಇನ್ನು ಎರಡು ಮೂರು ದಿವಸಗಳಲ್ಲಿ ಕೆಲಸ ಆಗಬಹುದು.”

“ನೀವೆಲ್ಲರೂ ಪ್ಯಾಕ್ ಮಾಡಿಕೊಂಡು ಹೊರಡಲು ಸಿದ್ಧರಾಗಿರಿ.”

“ಎಸ್, ಸರ್.”

“ಹಾಲಿವುಡ್‌ಗೆ ಲಾಂಗ್ ಡಿಸ್ಟನ್ಸ್ ಕಾಲ್ (Long distance call) ತೆಗೆದುಕೊಂಡು ನಾವು ಬರುವ ವಿಷಯ ತಿಳಿಸಿ.”

“ತಿಳಿಸುತ್ತೇನೆ.”

“ನಾನು ಅರಸುತ್ತಿದ್ದ ಕಲಾವಿದೆ ಸಿಕ್ಕಿದ್ದಾಳೆ ಗೇಲ್ - ನನ್ನ ಮುಂದಿನ ಪಿಕ್ಚರ್ ನೋಡಿ. ಸಿನೀಮಾ ಜಗತ್ತಿನಲ್ಲಿ ಇದು ಒಂದು ನೂತನ ಅಧ್ಯಾಯವನ್ನು ಆರಂಭಿಸುತ್ತದೆ.”

“ಆ ಭರವಸೆ ನನಗಿದೆ.”

“ಗೇಲ್, ನನ್ನ ಆಯ್ಕೆ ನಿಮಗೆ ಒಪ್ಪಿಗೆಯಾಯಿತೇ ?”

“ಸೂರ್ಯನಿಗೆ ಕುರುಡುದೀಪ ದಾರಿ ತೋರಿಸುವುದೇ ಮಿ. ರೋಸಿನಿ.”

“ಗೇಲ್ ನೀವು ಒಳ್ಳೆಯ ಸೆಕ್ರೆಟರಿಗಳೂ ಆಗಿದ್ದೀರಿ - ಒಳ್ಳೆಯ ಗೆಳೆಯರೂ ಆಗಿದ್ದೀರಿ.”

“ತಮ್ಮ ಔದಾರ್ಯದ ಫಲ - ಸರ್, ಸ್ವಾತಂತ್ರ್ಯವಹಿಸಿ ನಾನೊಂದು ಮಾತು ಹೇಳಲೇ ?”

“ಹೇಳಿ - ಗೇಲ್”

“ಕಲೆ ಮತ್ತು ಶೃಂಗಾರ ಬೆರಸಬೇಡಿ.”

“ನನ್ನ ಕಲೆಗೆ ಶೃಂಗಾರವೇ ಪ್ರಚೋದಕ ಗೇಲ್ - ಶೃಂಗಾರಕ್ಕೆ ನನ್ನ ಕಲೆಯೇ ಪ್ರಚೋದಕ. ಎರಡನ್ನೂ ಹೇಗೆ ಬೇರ್ಪಡಿಸಲಿ ?”

“ಇರೀನಾ, ಸ್ವೆಲ್ಲಾ, ಮೇರಿಯಾನಾ ಪ್ರಕರಣ ಜ್ಞಾಪಿಸಿಕೊಳ್ಳಿ. ನೀವು ಸಂಪಾದಿಸಿದುದೆಲ್ಲಾ ಅವರ ಜೀವನಾಂಶಕ್ಕೇ ಹೋಯಿತು.”

“ಹೇಗೆ ಬಂತೋ ಹಾಗೇ ಹೋಯಿತು ಗೇಲ್ - ನಮ್ಮಪ್ಪನ ಮನೆಯಿಂದ ತಂದದ್ದೇನು ವಿಸ್ಕಿ ಕುಡಿಯುವ ಅಭ್ಯಾಸ.”

“ನಿಮ್ಮಂಥ ಕಲಾವಿದರು ಜಗತ್ತಿನಲ್ಲಿ ದುರ್ಲಭ.”

“ನಿಮ್ಮ ಮನಸ್ಸು ಸದಾ ಶಾಂತವಾಗಿರಬೇಕೆಂಬುದೇ ನನ್ನ ಆಕಾಂಕ್ಷೆ.”

“ಗೇಲ್ - ನೀವು ಭಾವನಾಪರವಶರಾಗುತ್ತಿದ್ದೀರಿ. ನನಗೆ ಶಾಂತಿ ಬೇಕಿಲ್ಲ ಗೇಲ್ - ಅದು ವಿಧವೆಯರ ಸೊತ್ತು - ವೆಸೂವಿಯಸ್ಸಿನ ಹಾಗಿರುವ ನನ್ನ ಮನಸ್ಸಿಗೆ ಕ್ರಾಂತಿ ಬೇಕು - ಕ್ರಾಂತಿ !”

ಕ್ಷಣಕಾಲ ನೀರವತೆಯಿಂದ ನಿಂತ ಗೇಲ್ ಪ್ಯಾಟ್ರಿಕ್,

“ಮಿಸ್, ಮೋಹಿನಿಯವರನ್ನು ಕರೆತರಲು ಹೋಗುತ್ತೇನೆ” ಎಂದರು.

“ಹೋಗಿ ಗೇಲ್ - ಬೇಗ ಕರೆದುಕೊಂಡು ಬನ್ನಿ–”

ಎಂದು ರೋಸಿನಿ ತಮ್ಮ ಗ್ಲಾಸಿಗೆ ವಿಸ್ಕಿ ಬಗ್ಗಿಸಿಕೊಂಡರು.

# ೩೦

ಹಾಲಿವುಡ್ !

ಎಲ್ಲ ಕಲಾವಿಲಾಸಿಗಳ ಕನಸಿನ ಸ್ವರ್ಗ !

ಹೊನ್ನು ಹೊಳೆಯ ತಲಕಾವೇರಿ !

ರೂಪರಾಣಿಯರ ಆಡುಂಬೊಲ !

ರಜತಪರದೆಯ ರಾಜ್ಯ !

ಆ ರಾಜ್ಯಕ್ಕೆ - ಆ ಕನಸಿನ ಸ್ವರ್ಗಕ್ಕೆ ಮೋಹಿನಿ ಬಂದಿದ್ದಳು.

ಅವಳ ಕನಸು ನನಸಾಗಿತ್ತು !

ನನಸಾಗಿದೆಯೆಂಬ ಕಲ್ಪನೆಯೇ ಅವಳಿಗೆ ಬರಲೊಲ್ಲದು.

ಬೆವರ್ಲಿ ಹಿಲ್ಸ್‌ನಲ್ಲಿ ರೋಸಿನಿಯ ಭವ್ಯ ಬಂಗಲೆಯಲ್ಲಿ ಮೋಹಿನಿ ಪ್ರತಿಷ್ಠಿತಳಾಗಿದ್ದಳು.

ರೋಸಿನಿಯ ಸೇವಕಿ ಫಿಲ್ಲಿಸ್, ಮೋಹಿನಿಯ ಯೋಗಕ್ಷೇಮ ನೋಡಿಕೊಳ್ಳಲು ನಿಯಮಿಸಲ್ಪಟ್ಟಳು.

ಆರು ವರ್ಷಕಾಲ ಸತತವಾಗಿ ರೋಸಿನಿಯವರ, ಅವರ ಮಾಜಿ ಸಹಧರ್ಮಿಣಿಯವರ ಸೇವೆ ಸಲ್ಲಿಸಿದ್ದ ಫಿಲ್ಲಿಸ್, ರೋಸಿನಿಯವರ ಬಗ್ಗೆ ಅಪಾರ ಗೌರವ, ಭಕ್ತಿ ತಳೆದಿದ್ದಳು. ರೋಸಿನಿಯವರು ಏನೇ ಆಡಲಿ - ಏನೇ ಮಾಡಲಿ ಅದನ್ನು ಸೌಹಾರ್ದಯುತವಾಗಿ ನೋಡುವ ಮನೋಭಾವ ಫಿಲ್ಲಿಸ್ ಬೆಳೆಸಿಕೊಂಡಿದ್ದಳು.

ಹೊಸ ಯಜಮಾನಿತಿಯ ಪರಿಚಯವಾದ ಕೆಲವು ದಿನಗಳ ತರುವಾಯ ಫಿಲ್ಲಿಸ್,

"ಮ್ಯಾಡಾಂ ಮೋ, ನೀವು ಇಲ್ಲಿ ಶಾಶ್ವತವಾಗಿರಲು ಬಂದಿರುವಿರಾ?"

"ಹಾಗೇ ಕಾಣುತ್ತದೆ ಫಿಲ್ಲಿಸ್."

"ಬಾಸ್ ಅವರ ಭಾವ - ಸ್ವಭಾವ ನಿಮಗೆ ಗೊತ್ತಿರಬಹುದು."

"ಅಲ್ಪಸ್ವಲ್ಪ ಗೊತ್ತಿದೆ."

"ಅವರು ಅಪೂರ್ವ ಪ್ರತಿಭಾಶಾಲಿಗಳು. ಬಾಕ್, ಬೀಥೋವನ್, ಚೊಪಿನ್‌ರ ಪಂಕ್ತಿಯಲ್ಲಿ ನಿಲ್ಲಬಲ್ಲ ಕಲಾವಿದರು-"

"ಹಾಗೆಂದು ನಾನು ಕೇಳಿದ್ದೇನೆ."

"ಪ್ರತಿಭೆಗೂ ಪೈತ್ಯಕ್ಕೂ ಸಾಮ್ಯವಿದೆ."

"ರೋಸಿನಿ ಪೈತ್ಯಗಾರರೇ ?"

"ಎಲ್ಲ ಪ್ರತಿಭಾಶಾಲಿಗಳೂ ಪೈತ್ಯಗಾರರೇ! - ನೀವು ಬಾಸ್ ಬಗ್ಗೆ ಬಹಳ ಎಚ್ಚರದಿಂದಿರಬೇಕು."

"ನಾನು ಹೇಗೆ ವರ್ತಿಸಬೇಕೆನ್ನುವುದನ್ನು ನೀನು ತಿಳಿಸು ಫಿಲ್ಲಿಸ್"

"ಊಳಿಗದಾಳಿಗೆ ಎಷ್ಟು ಯಜಮಾನಿಕೆ ಎಂದು ಭಾವಿಸುವಿರೇನೋ ?"

"ಇಲ್ಲ ಫಿಲ್ಲಿಸ್. ನೀನೂ ನಾನೂ ಸ್ನೇಹಿತರಾಗಿರಬೇಕು."

"ನೀವು ಬಾಸರ ಬಗ್ಗೆ ನಿಷ್ಠೆಯಿಂದಿದ್ದರೆ, ನಾನು ನಿಮಗೆ ಪ್ರಾಣಕೊಡಲು ಸಿದ್ಧಳಾಗಿದ್ದೇನೆ."

"ನಿಷ್ಠೆಯಿಂದಿರುತ್ತೇನೆ ಫಿಲ್ಲಿಸ್. ಆಲ್ಬರ್ಟೋರ್ ಇಂದಲ್ಲವೇ ನನ್ನ ಭವಿಷ್ಯ ರೂಪಿತವಾಗುವುದು."

"ಮೊದಮೊದಲು ಎಲ್ಲರೂ ಹಾಗೇ ಹೇಳುತ್ತಾರೆ ಮ್ಯಾಡಾಂ - ಕೀರ್ತಿಯ ಕುದುರೆಯೇರಿದ ಮೇಲೆ ಯಾರಿಗೂ ಮೈಮೇಲೆ ಪ್ರಜ್ಞೆ ಇರುವುದಿಲ್ಲ."

"ನನ್ನ ವಿಷಯ ನಾನೇ ಹೇಳಿಕೊಳ್ಳಬಾರದು ಫಿಲ್ಲಿಸ್ - ಕಾಲಾನುಕಾಲಕ್ಕೆ ನೀನೇ ನೋಡುವೆಯಂತೆ - ಆಲ್ಬರ್ಟೋರ್ ವಿಷಯ ಹೇಳುತ್ತೇನೆಂದೆ - ಹೇಳು."

"ಯಾವದಾದರೂ ಉದ್ಯಮ ಕೈಗೊಂಡು, ಬಾಸ್, ತದೇಕ ಧ್ಯಾನನಿರತರಾಗಿರುವಾಗ ಅವರ ಮಾತಿಗೆ ಪ್ರತಿ ಹೇಳಕೂಡದು ಮ್ಯಾಡಂ. ಕರೀ ಕಾಗೆ ಬೆಳ್ಳಗಿದೆಯೆಂದು ಅವರು ಹೇಳಿದರೂ 'ಹೂ' ಎನ್ನಬೇಕು. ಅವರು ತುಸು ಶಾಂತಿಸ್ಥಿತಿಗೆ ಬಂದ ಮೇಲೆ ಬೇಕಾದದ್ದು ಹೇಳಿ – ಮಕ್ಕಳಂತೆ ಲಾಲಿಸುತ್ತಾರೆ."

"ಆಗಬಹುದು – ಮುಂದೆ?"

"ಅವರ ಮಾಜಿ ಪತ್ನಿಯರು - ದಾಂಪತ್ಯ ವಿಚ್ಛೇದನಗಳ ಬಗ್ಗೆ ಮಾತ್ರ ಪ್ರಸ್ತಾಪಿಸಬೇಡಿ. ಇವರ ದಾಂಪತ್ಯ ಜೀವನ ಮಹಾ ದುರಂತ!"

"ಆಲ್ಬರ್ಟೋರ್ ಅತಿಕಾಮುಕರೇ ಫಿಲ್ಲಿಸ್."

"ಇವನ ನಾಲ್ಕನೆಯ ಹೆಂಡಕಿ ಜೇನ್ ಇದ್ದುದರಲ್ಲಿ ಒಳ್ಳೆಯವರು. ನೀವು ಕೇಳಿದ ವಿಷಯ ನಾನು ಅವರೊಂದಿಗೆ ಚರ್ಚಿಸಿದ್ದೇನೆ. ಜೇನ್ ಹೇಳಿದ್ದನ್ನೇ ನಾನು ನಿಮಗೆ ಹೇಳುತ್ತೇನೆ."

"ದಯೆಯಿಟ್ಟು ಹೇಳು ಫಿಲ್ಲಿಸ್."

"ಬಾಸ್ ಹೆಣ್ಣನ್ನು ಹೆಣ್ಣೆಂದು ಪ್ರೀತಿಸುವುದಿಲ್ಲ. ಅವರ ದೃಷ್ಟಿಯಲ್ಲಿ ಹೆಣ್ಣು ಒಂದು ಸಂಕೇತ – ಸೌಂದರ್ಯ, ಅನುಕಂಪ, ಔದಾರ್ಯ, ತ್ಯಾಗಗಳ ಮೂರ್ತಿವಂತ ಸ್ವರೂಪ. ತಮ್ಮ ಕನಸಿನ ಕಲ್ಪನೆಯಂತೆ ತಮ್ಮ ಕಾಮಿನಿ ಇದ್ದಾಳೆಂದು ಭಾವಿಸುವುದೇ ಬಾಸ್ ಮಾಡುವ ದೊಡ್ಡ ತಪ್ಪು. ಯಾವ ಹೆಂಗಸೂ ಬಾಸ್‌ರ ಆದರ್ಶದ ಮಟ್ಟಕ್ಕೆ ಬರಲು ಸಾಧ್ಯವಿಲ್ಲ. ಅವಳಲ್ಲಿ ಲೋಪದೋಷಗಳನ್ನು ಕಂಡಕೂಡಲೆ ಬಾಸ್ ಬುದ್ಧಿಯೇ ಕೆಟ್ಟು ಹೋಗುತ್ತದೆ. ಜೇನ್ ತರುವಾಯ ಬಂದ ಹೆಲನ್ನಳ ಕಥೆ ಹೇಳುತ್ತೇನೆ ಕೇಳಿ. ನಟಿಯರಾಯಿತು - ಶ್ರೀಮಂತ ಕನ್ಯೆಯರಾಯಿತು - ವಿದ್ಯಾವತಿಯರಾಯಿತು. ಐದು ದಾಂಪತ್ಯವಿಚ್ಛೇದನಗಳಾದ ಮೇಲೆ ಬಾಸ್ ಕೆಲವು ತಿಂಗಳು ಸುಮ್ಮನೆ ಇದ್ದರು. ಆದರೆ ಅವರ ಜೀವನಕ್ಕೆ ಗಾಳಿ, ಬೆಳಕುಗಳಷ್ಟೇ ಸ್ತ್ರೀಯೂ ಮುಖ್ಯ - ಪಾಲಿ ಆಡ್ಲರ್ (Poly Adler) ಹೆಸರು ಕೇಳಿದ್ದೀರಾ ?"

"ಇಲ್ಲ. ಈಕೆ ಯಾರು ?"

"ಪ್ರಸಿದ್ಧ ವೇಶ್ಯಾವಾಟದ ಯಜಮಾನಿತಿ. ಪಾಲಿ, ಇತರ ವೃದ್ಧ ಕುಂಟಲಗಿತ್ತಿಯರಂತೆ ಹೃದಯಶೂನ್ಯಳಾದ, ಪರರಕ್ತೋಪಜೀವಿಯಲ್ಲ. ತನ್ನ ಆಶ್ರಯದಲ್ಲಿರುವ ವೇಶ್ಯೆಯರಿಗೆ ಮಾತೃಸ್ವರೂಪಳಾಗಿದ್ದಾಳೆ. ಅವರ ಆರೋಗ್ಯ, ಸುಖ, ಭವಿಷ್ಯತ್ತುಗಳನ್ನು ನೋಡಿಕೊಳ್ಳುತ್ತಾಳೆ. ಪಾಲಿಯ ವೇಶ್ಯಾವಾಟದಲ್ಲಿದ್ದ ಅನೇಕ ಬಾಲಿಕೆಯರು ವಿವಾಹವಾಗಿ ಇಂದು ಪ್ರತಿಷ್ಠಿತ ಸ್ಥಾನಗಳನ್ನಲಂಕರಿಸಿದ್ದಾರೆ. ಬಾಸ್, ಪಾಲಿಯ ಪರಿಚಯ ಮಾಡಿಕೊಂಡು ಅವಳ ಮನೆಯಿಂದ ಹೆಲನ್ನಳನ್ನು ಕರೆತಂದು ಇಲ್ಲಿ ಸ್ಥಾಪಿಸಿದರು. ಅವಳಿಗೆ ಫ್ರೆಂಚ್, ಪಿಯಾನೋ ಕಲಿಸಲು ಶಿಕ್ಷಕರನ್ನು ನೇಮಿಸಿದರು. ಅವಳ ವಾರ್ಡ್‌ರೋಬ್ ಯಾವ ತಾರಾಮಣಿಗೂ ಇರಲಿಲ್ಲ, ನಾಯಿಯನ್ನು ಸಿಂಹಾಸನದ ಮೇಲೆ ಕೂಡಿಸಿದರೆ, ಅದು ಎಂಜಲಿಗೆ ಆಶಿಸುವುದನ್ನು ಬಿಟ್ಟೀತೇ? ಹೆಲೆನ್ನಳ ಮಾದಕ ಸೌಂದರ್ಯ ಕಂಡರೆ, ಅವಳು ಬಾಯಿ ಅಷ್ಟು ಹೊಲಸು ಎಂದು ಯಾರೂ ನಂಬಲಾರರು ! ಬಾಸ್ ತನ್ನನ್ನು ಲಗ್ನವಾಗುವವರೆಗೆ ಹೆಲನ್ ತಕ್ಕಮಟ್ಟಿಗೆ ಗಂಭೀರವಾಗಿಯೇ ಇದ್ದಳು. ಬಾಸ್ ಉಂಗುರ, ಹೆಲನ್ನಳ ಬೆರಳು ಅಲಂಕರಿಸಿದ ಕೂಡಲೆ ಅವಳ ಸ್ವಭಾವವೇ ಬದಲಾಯಿಸಿತು - ಸ್ವಭಾವ ಬದಲಾಯಿಸಿತು ಎನ್ನುವುದಕ್ಕಿಂತರೂ ನಿಜಸ್ವಭಾವ ಅಭಿವ್ಯಕ್ತವಾಯಿತು ಎಂದು ಹೇಳಬಹುದು.

ಹೆಲನ್ ಮನಸ್ಸು ಬಂದಂತೆ ವರ್ತಿಸಲಾರಂಭಿಸಿದಳು.

ಮನೆಗೆ ಬಂದರೆ ಬಂದಳು - ಇಲ್ಲದಿದ್ದರೆ ಇಲ್ಲ !

ಬಾಸ್ ಕೇಳಿದರೆ ತನ್ನ ಗಟಾರ ಬಾಯನ್ನು ತೆರೆದು, ಬಾಲ್ಯಾರಭ್ಯ ಕಲಿತಿದ್ದ ಹೊಲಸು ಶಬ್ದಗಳನ್ನು ಪ್ರಯೋಗಿಸುತ್ತಿದ್ದಳು.

ಅವಳ ಬಗ್ಗೆ ಬಾಸ್ ತೋರಿಸಿದ್ದ ಸಹನೆ ಅನಾದೃಶವಾಗಿತ್ತು - ದೇವಸದೃಶವಾಗಿತ್ತು.

ಹೆಲನ್ ಕಂಠಪೂರ್ತಿ ಕುಡಿದು, ತೂರಾಡಿಕೊಂಡು ಮನೆಗೆ ಬಂದರೆ, ತಾವೇ ಅವಳನ್ನೆತ್ತಿಕೊಂಡು ಹೋಗಿ ಹಾಸಿಗೆಯ ಮೇಲೆ ಮಲಗಿಸಿ ಉಪಚರಿಸುತ್ತಿದ್ದರು.

ಒಂದು ರಾತ್ರಿ - ಸುಮಾರು ಹನ್ನೆರಡು, ಒಂದು ಗಂಟೆಯಿರಬಹುದು

ಹೆಲನ್ ಅರ್ಧನಗ್ನಳಾಗಿ ಮನೆಗೆ ಬಂದು ಬಾಗಿಲು ಬಡಿದಳು.

ಹಜಾರದಲ್ಲಿ ಕುಳಿತು, ಹೆಲನ್ನಳನ್ನೇ ನಿರೀಕ್ಷಿಸುತ್ತಿದ್ದ ಬಾಸ್ ಎದ್ದು ಹೋಗಿ ಬಾಗಿಲು ತೆಗೆದರು.

ಲಿಂಗರಿ (Lingerie) ಬಿಟ್ಟು ಹೆಲನ್ ಮೇಲೆ ಯಾವ ಬಟ್ಟೆಯೂ ಇಲ್ಲ. ಅವಳ ಬೆಲೆಬಾಳುವ ಮಿಂಕ್ ಕೋಟ್ ಎಲ್ಲಿ ಹೋಯಿತೋ ಏನೋ ?

ಕೋಪೋದ್ದೀಪಿತರಾದ ಬಾಸ್,

'ಇದೇನು ನಿನ್ನ ಅವಸ್ಥೆ ಹೆಲನ್? - ಎಲ್ಲಿಗೆ ಹೋಗಿದ್ದೆ ? – ಎಲ್ಲಿಂದ ಬರುತ್ತಿದ್ದೀ?' ಎಂದು ಕೇಳಿದರು.

'ನನ್ನ ಪ್ರಿಯನ ತೋಳತೆಕ್ಕೆಯಿಂದ.'

'ಯಾಕೇ ನಿನ್ನ ಪ್ರಿಯ?'

'ಯಾವನೋ ಒಬ್ಬ - ಪ್ರಿಯರ ಹೆಸರುಗಳನ್ನೆಲ್ಲಾ ಜ್ಞಾಪಕ ಇಟ್ಟುಕೊಳ್ಳುವುದಕ್ಕೆ ನಾನೇನು ಗಣಿತದ ಉಪಾಧ್ಯಾಯಿನಿಯೇ?'

ಬಾಸ್ ತಾಳ್ಮೆಗೆಟ್ಟು ಅವಳನ್ನು ಒದ್ದು ಹೊರದೂಡಿದರು.

ಬಾಸ್ ವಿರುದ್ಧ ದಾಂಪತ್ಯ ವಿಚ್ಛೇದನಕ್ಕಾಗಿ ಹೆಲನ್ ಕೇಸ್ ಹೂಡಿ, ಲಕ್ಷಾಂತರ ಡಾಲರ್ ಜೀವನಾಂಶ ಪಡೆದಳು.

ಹೆಲನ್ ಪ್ರಕರಣದಿಂದಲಾದರೂ ಬಾಸ್‌ಗೆ ಬುದ್ಧಿ ಬಂದಿದೆ ಎಂದು ಭಾವಿಸಿದ್ದೆ...”

“ಬುದ್ಧಿ ಬಂದಿಲ್ಲ - ನನ್ನನ್ನು ಕರೆತಂದಿದ್ದಾರೆ!”

“ನಾನು ಹಾಗನ್ನುತ್ತಿಲ್ಲ ಮ್ಯಾಡಾಂ - ವಸ್ತು ಸ್ಥಿತಿ ವಿವರಿಸಿದೆ ಅಷ್ಟೇ!”

“ಆಲ್ಬರ್ಟೋ ತುಂಬ ನೊಂದಿದ್ದಾರೆ ಫಿಲ್ಲಸ್.”

“………………..”

“ನಾನು ಅವರನ್ನು ನೋಯಿಸುವುದಿಲ್ಲ.”

“ಬಾಸ್ ನಿಮ್ಮನ್ನು ಮದುವೆಯಾಗುವುದಿಲ್ಲ.”

“ಏಕೆ?”

“ಆರು ದುರಂತ ಮದುವೆಗಳ ನೆನಪು ಅವರಿಗೆ ಮರೆತು ಹೋಗಿಲ್ಲ.”

“ಮದುವೆಯಾಗಲು ನಾನು ಒತ್ತಾಯಪಡಿಸುವುದಿಲ್ಲ ಫಿಲ್ಲಿಸ್ - ಅವರು ಮದುವೆಯಾಗಲು ಬಯಸಿದರೆ ನಾನು ಬೇಡವೆನ್ನುವುದಿಲ್ಲ.”

“ನೋಡೋಣ”

ಎಂದಷ್ಟೇ ಫಿಲ್ಲಿಸ್ ಹೇಳಿದಳು.

ರೋಸಿನಿ ತಮ್ಮ ದೈತ್ಯಶಕ್ತಿಯನ್ನು ಪೂರ್ಣವಾಗಿ ನಿವೇದಿಸಿ, ಚಿತ್ರಸಿದ್ಧತೆ ಆರಂಭಿಸಿದರು.

ತಂಡತಂಡವಾಗಿ ತಜ್ಞರು ವಿವಿಧ ಭಾಗಗಳ ಕೆಲಸ ನಿರ್ವಹಿಸುತ್ತಿದ್ದರು.

ಮೋಹಿನಿ ರೋಸಿನಿಯವರ ಪ್ರೇಯಸಿಯಾಗಿದ್ದುದಲ್ಲದೆ 'ತಂತ್ರ ಸಲಹೆಗಾರಳೂ' ಆಗಿದ್ದಳು. ಕಲೆಗೆ ಸಂಬಂಧಪಟ್ಟ ಪ್ರತಿ ವಿಷಯದಲ್ಲಿಯೂ ರೋಸಿನಿ ಮೋಹಿನಿಯ ಸಲಹೆ ಪಡೆಯುತ್ತಿದ್ದರು.

ಒಂದು ದಿನ ಅವರ ಕಛೇರಿಯಲ್ಲಿ ಆಪ್ತಾಲೋಚನ ಸಭೆ ಸೇರಿತ್ತು.

ಒಂದು ಹಾಳೆ ಕಾಗದನನ್ನೆಳೆದುಕೊಂಡ ರೋಸಿನಿ, ಕೆಂಪು ಪೆನ್ಸಿಲ್ಲಿನಿಂದ ಅದರ ಮೇಲೆ ಬರೆದು ಗೇಲ್ ಪ್ಯಾಟ್ರಿಕ್ಕನ ಕೈಗಿತ್ತು,

"ಚಿತ್ರಪ್ರದರ್ಶನ ಆರಂಭಿಸುವವರೆಗೆ ಇಷ್ಟೇ ಪ್ರಕಟನೆ ಸಾಕು, ಗೇಲ್" ಎಂದರು.

ಗೇಲ್ ಪ್ಯಾಟ್ರಿಕ್ ಕಾಗದವನ್ನು ನೋಡಿಕೊಂಡು, ಅದನ್ನು ಮೋಹಿನಿಯ ಕೈಗಿತ್ತ,

'ವಿಶ್ವಕಲಾ ವೈಭವಕ್ಕೆ

ಆಲ್ಬರ್ಟೋ ರೋಸಿನಿಯವರ ಅಭೂತಪೂರ್ವ ಕಾಣಿಕೆ

**'ರಾಜ ಹಂಸ'**

ಚಿತ್ರಕಥೆ ಸಂಭಾಷಣೆ ಸಂಗೀತ ದಿಗ್ದರ್ಶನ

**ಆಲ್ಬರ್ಟೋ ರೋಸಿನಿ**

ಯೂನಿವರ್ಸಲ್ ಆರ್ಟ್ಸ್

ಹಾಲಿವುಡ್ (ಯು ಎಸ್. ಎ,)'

ಪ್ಯಾಟ್ರಿಕ್ ಮೆಲ್ಲನೆ,

"ಬಾಸ್. ಇದು ನಿಮ್ಮ ಮ್ಯಾಗ್ನಂ ಓಪಸ್ (Magnum opus)[2]"

"ಹೌದು ಗೇಲ್ - ಅದರಲ್ಲಿ ನಿನಗಿನ್ನೂ ಸಂದೇಹವಿದೆಯೇನು?"

"ಇಲ್ಲ ಇಲ್ಲ ಬಾಸ್."

---

[2] ಮಹದ್ಕೃತಿ

“ಹಾಗಾದರೆ... .?”

“ಪ್ರಕಟನೆ ಸಾಲದು?”

“ಹೇಗಿರಬೇಕು.”

“ನಟವರ್ಗದ ಹೆಸರುಗಳನ್ನು ಪ್ರಕಟಿಸಬೇಡವೇ ?- ನೀವೊಂದು ಪ್ರೆಸ್ ಕಾನ್‌ಫರೆನ್ಸ್ (Press Conference) ಇಟ್ಟುಕೊಳ್ಳಬೇಡವೇ? ಕೋಟ್ಯಾಂತರ ಡಾಲರುಗಳನ್ನು ಈ ಚಿತ್ರದ ಮೇಲೆ ಸುರಿಯುವಾಗ ಸರಿಯಾದ ಪ್ರಚಾರವಾಗದಿದ್ದರೆ…..”

“ಚಿತ್ರ ನೋಡಿದವರೇ ಅದರ ಪ್ರಚಾರಕರಾಗುತ್ತಾರೆ. ವಿಶ್ವದ ಎಲ್ಲ ಪ್ರಮುಖ ಕೇಂದ್ರಗಳಲ್ಲಿಯೇ ಒಮ್ಮೆಲೇ ಚತ್ರ ಬಿಡುಗಡೆಯಾಗಬೇಕು - ಚಿತ್ರ ಮುಗಿಯುವವರೆಗೆ ಇದರ ಬಗ್ಗೆ ಯಾವ ಸುದ್ದಿಯೂ ಹೊರಬೀಳದಿರಲಿ.”

“ಪತ್ರಿಕಾ ಪ್ರತಿನಿಧಿಗಳು ಬೇಟೆನಾಯಿಗಳಿದ್ದಂತೆ - ಅವರ ಕಣ್ಣು ತಪ್ಪಿಸಲು ಸಾಧ್ಯವೇ ಬಾಸ್. ಈಗಲೇ ಅವರು ಹಲವಾರು ಸುದ್ದಿಗಳನ್ನು ಪ್ರಕಟಿಸಿದ್ದಾರೆ. ನಾವು ಅವರಿಗೆ ಸರಿಯಾದ ಸುದ್ದಿ ಒದಗಿಸದಿದ್ದರೆ ತಪ್ಪುಗಳನ್ನೇ ಪ್ರಕಟಿಸುತ್ತಾರೆ.”

“ಅವರು ಏನು ಬೇಕಾದರೂ ಮಾಡಿಕೊಳ್ಳಬಹುದು. ನಮ್ಮಿಂದ ಮಾತ್ರ ಯಾವ ಸುದ್ದಿಯೂ ಹೊರಗೆ ಹೋಗತಕ್ಕದ್ದಲ್ಲ.”

ರೋಸಿನಿ ಹಟ ಹಿಡಿದ ಮೇಲೆ ವಾದ ಮಾಡಿ ಪ್ರಯೋಜನವಿಲ್ಲವೆಂಬುದು ಗೇಲ್ ಪ್ಯಾಟ್ರಿಕ್‌ಗೆ ಚೆನ್ನಾಗಿ ಗೊತ್ತಿತ್ತು.

ಅವನು ವಿಷಯಾಂತರ ಮಾಡಿ,

“ನಾಯಕನನ್ನೇ ಇನ್ನೂ ನಿಶ್ಚಯಿಸಿಲ್ಲವಲ್ಲ ಬಾಸ್.”

“ಕಲಾವಿದರ ಭಾವಚಿತ್ರಗಳೆಲ್ಲಿ ?”

ಗೇಲ್ ಪ್ಯಾಟ್ರಿಕ್ ಎರಡು ದೊಡ್ಡ ಫೈಲ್‌ಗಳನ್ನು ತೆಗೆದು ರೋಸಿನಿಯವರ ಮೇಜಿನ ಮೇಲಿಟ್ಟು,

“ಮೇಲಿರುವ ಫೈಲಿನಲ್ಲಿ ಪ್ರಸಿದ್ಧ ಕಲಾವಿದರ ಭಾವಚಿತ್ರಗಳಿವೆ - ಕೆಳಗಿರುವ ಫೈಲಿನಲ್ಲಿ ಅಲ್ಪ ಖ್ಯಾತರು, ಹೊಸಬರು, ಅಭ್ಯರ್ಥಿಗಳ ಭಾವಚಿತ್ರಗಳಿವೆ.”

ಮೇಲಿದ್ದ ಫೈಲನ್ನು ಒತ್ತಟ್ಟಿಗೆ ತಳ್ಳಿದ ರೋಸಿನಿ. ಕೆಳಗಿದ್ದ ಫೈಲಿನಲ್ಲಿದ್ದ ಭಾವಚಿತ್ರಗಳನ್ನು ನೋಡುತ್ತಾ.

“ಕಥಾನಾಯಕನನ್ನು ನಾನೇಕೆ ಆರಿಸಲಿ- ಮೋ ಹೇಗೂ ನಾಯಕಿ ಪಾತ್ರ ಅಭಿನಯಿಸುತ್ತಾಳೆ ನಾಯಕನನ್ನು ಅವಳೇ ಅರಿಸಲಿ”

ಎಂದು ಫೈಲನ್ನು ಮೋಹಿನಿಯತ್ತ ತಳ್ಳಿದರು.

ಮೋಹಿನಿ ಭಾವಚಿತ್ರಗಳನ್ನು ನೋಡುತ್ತಾ,

’ಈ ನಟರ ವಿಷಯ ನನಗೇನು ಗೊತ್ತಿದೆ, ಅವರ ಪ್ರತಿಭೆ ಅನುಭವಗಳ ವಿಷಯ ತಿಳಿಯದೆ ನಾನು ಹೇಗೆ ಆಯ್ಕೆ ಮಾಡಲಿ ?”

“ಮೋ - ನಿನಗೆ ಕಥೆ ಗೊತ್ತಿದೆ. ನನ್ನ ಕಥಾನಾಯಕ ಹೇಗಿರಬೇಕೆಂಬುದನ್ನು ವಿವರಿಸಿದ್ದೇನೆ. ಈ ಭಾವಚಿತ್ರಗಳಲ್ಲಿ ಒಂದನ್ನು ಆರಿಸು - ನಾನು ಅವನಿಗೆ ಶಿಕ್ಷಣವಿತ್ತು, ನನ್ನ ಪಾತ್ರಕ್ಕೆ ತಕ್ಕಂತೆ ಅಳವಡಿಸಿಕೊಳ್ಳುತ್ತೇನೆ.”

ಫೈಲಿನ ಹಾಳೆಗಳನ್ನು ತಿರುವುತ್ತಾ ಮೋಹಿನಿ, ಒಂದು ಚಿತ್ರ ಆರಿಸಿ,

“ಈ ನಟ ಯಾರು ಮಿ. ಗೇಲ್ ಪ್ಯಾಟ್ರಿಕ್?”

ಗೇಲ್ ಪ್ಯಾಟ್ರಿಕ್ ಚಿತ್ರ ನೋಡಿ,

“ಇವನ ಹೆಸರು ಗಿಲ್ಬರ್ಟ್ ನಾರ್ಟನ್ (Gilbert Norton) - ವಾರ್ನರ್ ಬ್ರದರ್ಸ್ ಕಂಪೆನಿಯ ಕೆಲವು ಚಿತ್ರಗಳಲ್ಲಿ ಸಣ್ಣಪುಟ್ಟ ಪಾರ್ಟು ಮಾಡಿದ್ದಾನೆ.”

“ಗಿಲ್ಬರ್ಟ್ ಈಗ ಸ್ವತಂತ್ರನಾಗಿದ್ದಾನೆಯೇ?”

“ಇದ್ದಾನೆ-”

“ಸಂಜೆಗೆ ಬಂದು ನನ್ನನ್ನು ನೋಡುವಂತೆ ಹೇಳು ಗೇಲ್. ಈ ವಾರಾಂತ್ಯದಲ್ಲಿ ರಿಹರ್ಸಲ್ ಆರಂಭಿಸೋಣ - ಮುಂದಿನ ತಿಂಗಳು ಸೆಟ್ ಮೇಲೆ ಹೋಗಬೇಕು.”

“ಒಳ್ಳೆಯದು ಬಾಸ್”

ಎಂದು ಗೇಲ್ ಪ್ಯಾಟ್ರಿಕ್ ಎರಡು ಫೈಲುಗಳನ್ನೂ ಕೈಗೆತ್ತಿಕೊಂಡು ಹೊರಗೆ ಹೋದ.

ಒಂದು ಕಪಾಟು ತೆಗೆದ ರೋಸಿನಿ, ಅದರಿಂದ ಎರಡು ಗ್ಲಾಸುಗಳನ್ನೂ, ವಿಸ್ಕಿ ಶೀಷೆಯನ್ನೂ ತೆಗೆದುಕೊಂಡು, ಗ್ಲಾಸುಗಳಿಗೆ ವಿಸ್ಕಿ ಬಗ್ಗಿಸಿ, ಸೈಫನ್ನಿನಿಂದ ಸ್ವಲ್ಪ ನೀರು ಸೇರಿಸಿ, ಒಂದನು ಮೋಹಿನಿಯ ಕೈಗಿತ್ತು,

“ನಮ್ಮ ಚಿತ್ರದ ಅಭ್ಯುದಯಕ್ಕೆ…….” ಎಂದರು.

ಇಬ್ಬರೂ ಗ್ಲಾಸ್ ಕೆಳಗಿಟ್ಟ ಕೂಡಲೆ, ರೋಸಿನಿ ಮೋಹಿನಿಯ ಬಳಿಗೆ ಬಂದು, ಅವಳನ್ನೆತ್ತಿ ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು,

"ಜಗತ್ತಿನ ಮೂಲೆ ಮೂಲೆಗಳಲ್ಲಿ ನಿನ್ನ ಹೆಸರು ನಿಯೋಸಿಯಾನ್ ದೀಪಗಳಲ್ಲಿ ಬೆಳಗುವಂತೆ ಮಾಡುತ್ತೇನೆ ಮೋ."

"ನನಗೆ ನೀವು ಪ್ರಕಟನೆಯನ್ನೇ ಕೊಡುತ್ತಿಲ್ಲ."

"ಗೇಲ್ ದಡ್ಡ - ಅವನಿಗಿನ್ನೂ ಪ್ರಕಟನೆಯ ಅಆಇಈ ಗೊತ್ತಿಲ್ಲ. ನನ್ನದು ಬೂಮ್ ಪಬ್ಲಿಸಿಟಿ - ಚಿತ್ರಸಿದ್ಧವಾದ ಕೂಡಲೆ, ವಿಶ್ವದ ಎಲ್ಲ ಪ್ರಕಟನೆಯ ಸ್ಥಳಗಳನ್ನೂ ಆಕ್ರಮಿಸಿಬಿಡುತ್ತೇನೆ. ಪ್ರತಿಯೊಂದು ಪತ್ರಿಕೆಯೂ ವಿಶೇಷ ಪುರವಣಿ (Special supplement) ಪ್ರಕಟಿಸುವಂತೆ ಏರ್ಪಡಿಸುತ್ತೇನೆ."

"ಆಲ್ಬರ್ಟೋ - ನಿಜ ಹೇಳಿ - ನಿನಗೆ ನಾನು ಹೆಚ್ಚೋ ನಿಮ್ಮ ಚಿತ್ರ ಹೆಚ್ಚೋ?"

"ಎರಡೂ ಹೆಚ್ಚು - ಚಿತ್ರಕ್ಕಿಂತ ನೀನು ಹೆಚ್ಚು; ನಿನಗಿಂತ ಚಿತ್ರ ಹೆಚ್ಚು. ಎರಡು ಪ್ರೇಯಸಿಯರನ್ನೂ ಒಮ್ಮೆಲೇ ಕಟ್ಟಿಕೊಂಡ ಹುಚ್ಚು ಪ್ರೇಮಿ ನಾನು - ಮೋ, ನನಗೆ ಸ್ಫೂರ್ತಿ ಬಂದಾಗ ಏನಾಗುತ್ತದೆ ಬಲ್ಲೆಯಾ?"

"ಏನಾಗುತ್ತದೆ."

"ನರ ನಾಡಿಗಳು ಸಿಡಿದು ಹೋಗುತ್ತವೆ - ಬಿಸಿ ನೀರಿನ ಬುಗ್ಗೆಯಂತೆ ರಕ್ತ ಕುತಕುತನೆ ಕುದಿಯುತ್ತದೆ. ಆ ಆವೇಗ ತಡೆಯಲಾಗದೆ ಮಿತಿ ಮೀರಿ ಕುಡಿಯುತ್ತೇನೆ."

"ನಿಮ್ಮ ತಾಪ ನಿವಾರಣೆಯಾಗುನ ಬೇರೆ ಮಾರ್ಗವಿಲ್ಲವೇ?"

"ಇದೆ."

"ಯಾವದದು?"

"ಹೆಂಗಸಿನ ನಿರ್ಮಲ ಪ್ರೇಮ - ಅವಳ ದೇಹ, ಮನಸ್ಸಿನ ನಿವೇದನಾ."

"ಇಷ್ಟು ಅಲ್ಪ ವಿಷಯ ನಿಮ್ಮನ್ನು ತೃಪ್ತಿಪಡಿಸುವುದಾದರೆ...."

"ಪಡಿಸುತ್ತದೆ ಮೋ - ನಾನು ಜೀವಮಾನದಲ್ಲಿ ಯಾವಾಗಲೂ ಕೀರ್ತಿ ಬಯಸಲಿಲ್ಲ - ಆದರೆ ಕೀರ್ತಿ ಬಾಲ್ಯದಲ್ಲಿಯೇ ನನ್ನ ಕೊರಳಿಗೆ ಬಿತ್ತು. ಹಣ ಬಯಸಲಿಲ್ಲ - ರಾಶಿರಾಶಿಯಾಗಿ ಹಣ ನನ್ನ ಪಾದದ ಬಳಿ ಬಿತ್ತು. ಕುಲಗೆಟ್ಟ ಮೂಳಿಯವರಿಗೆ ಜೀವನಾಂಶ ಕೊಡುವುದಕ್ಕೆ, ಅದರ ಬಹುಭಾಗ ವಿನಿಯೋಗಿಸಿದೆ. ನಾನೂ ಒಬ್ಬ ಸಾಧಾರಣ ಬೂಜ್ವಾ (Bourgeois) ಮೋ – ನನಗೆ

ಬೇಕಾದುದೆಲ್ಲಾ ಇಚ್ಛನೆಯ ಸತಿ, ಬೆಚ್ಚನೆಯ ಮನೆ, ಹಸಿವು ಅಣಗುವಷ್ಟು ಆಹಾರ - ಮನಃತೃಪ್ತಿಯಾಗುವಂತೆ ಕೆಲಸ ಮಾಡುವ ಅವಕಾಶ."

"ನೀವು ಬಯಸಿರುವುದೆಲ್ಲಾ ಲಭ್ಯವಾಗಿದೆಯಲ್ಲಾ!"

"ಆಗಿದೆಯೇ?"

"ಇನ್ನೂ ಸಂದೇಹವೇ ?"

"ಇಚ್ಛನೆಯ ಸತಿ..."

"ನಾನಿಲ್ಲವೇ?"

"ಮೋ - ನನ್ನ ಕನಸಿನ ಕಾಮಿನಿ"

ಎಂದವಳನ್ನು ಎತ್ತಿಕೊಂಡು ಒಳಮಂದಿರ ಪ್ರವೇಶಿಸಿದರು.

ಕಾರ್ಯಕರ್ತರ ಸಮಾಲೋಚನ ಸಭೆಗಳಲ್ಲಿ ಶಾಂತಚಿತ್ತದಿಂದ ಪರರ ಅಭಿಪ್ರಾಯಗಳನ್ನು ಕೇಳಿ ತಿಳಿಯುತ್ತಿದ್ದ ರೋಸಿನಿಯನರನ್ನು ಮೋಹಿನಿ ನೋಡಿದ್ದಳು.

ಹಗಲಿರುಳುಗಳ ಪರಿವೆಯಿಲ್ಲದೆ ಏಕಾಗ್ರಚಿತ್ತರಾಗಿ ತಮ್ಮ ಕೃತಿಯನ್ನೇ ಕುರಿತು ಯೋಚಿಸುತ್ತ ಧ್ಯಾನಯೋಗಿಯನ್ನು ಮೋಹಿನಿ ನೋಡಿದ್ದಳು.

ಪಿಟೀಲ್ ಕೈಗೆತ್ತಿಕೊಂಡು ಮಧುರ ಸ್ವರಗಳನ್ನು ನುಡಿಸುತ್ತಾ, ಪ್ರಕೃತಿಯ ಸುಪ್ತ ಸೌಂದರ್ಯವನ್ನು ಅಭಿವ್ಯಕ್ತಿಗೊಳಿಸುತ್ತಿದ್ದ ರಸಋಷಿಯನ್ನು ಮೋಹಿನಿ ನೋಡಿದ್ದಳು.

ಲೋಕದ ಸಮಯಾಚಾರಗಳೆಲ್ಲವನ್ನೂ ಕಡೆಗಾಣಿಸಿ ಕಾಮೋಜ್ಜ್ವಲತೆಯಿಂದ ಪರಿತಪಿಸುತ್ತಿದ್ದ ರಸಿಕ ರತಿಪತಿಯನ್ನು ಮೋಹಿನಿ ನೋಡಿದ್ದಳು.

ಆದರೆ ಸೆಟ್ಟಿನ ಮೇಲೆ ದೈತ್ಯಶಕ್ತಿವೆತ್ತುನಿಂತು, ಹಲವಾರು ಅಶ್ವಗಳನ್ನು ಹೂಡಿ ನಡೆಸುತ್ತಿದ್ದ ಕರ್ಮಯೋಗಿಯನ್ನು ಅವಳು ಕಂಡಿರಲಿಲ್ಲ.

ಷೂಟಿಂಗ್ ಆರಂಭವಾದ ಕೂಡಲೆ ಹೊಸ ರೋಸಿನಿಯವರನ್ನು ಮೋಹಿನಿ ಕಾಣಬೇಕಾಯಿತು.

ಮೋಹಿನಿ, ಗೇಲ್, ಗಿಲ್ಬರ್ಟ್, ಇತರ ನಟನಟಿಯರು ಸೆಟ್ ಕೆಲಸಗಾರರು. ದೀಪದಾಳುಗಳು, ರಿಕಾರ್ಡಿಂಗ್ ವಿಭಾಗದ ನೌಕರರು ಎಲ್ಲರೂ ರೋಸಿನಿಯನರ ಕಣ್ಣುಗಳಲ್ಲಿ ಸಮಾನರು.

ಕೈಯಲ್ಲಿ ಮೆಗಾಫೋನ್ (Megaphone) ಹಿಡಿದು ಕೂಡುತ್ತಿದ್ದ ರೋಸಿನಿ, ಕಣ್ಸನ್ನೆಯಿಂದಲೇ ಎಲ್ಲ ಕೆಲಸಗಾರರಿಗೂ ಸಮಯೋಚಿತ ಸೂಚಕಗಳನ್ನು ಕೊಡುತ್ತಿದ್ದರು.

ಅವರು ಧ್ವನಿಯೆತ್ತರಿಸಿ ಮಾತನಾಡುತ್ತಿರಲಿಲ್ಲ.

ಯಾರನ್ನೂ ಬಯ್ಯುತ್ತಿರಲಿಲ್ಲ.

ಆದರೂ - ಸೆಟ್ ಮೇಲೆ ಸಮಸ್ತರೂ ರೋಸಿನಿ ಎಂದರೆ ಗಡಗಡ ನಡಗುತ್ತಿದ್ದರು.

ಷೂಟಿಂಗ್ ಶರವೇಗದಲ್ಲಿ ಸಾಗಿತು

ಒಂದೊಂದು ದೃಶ್ಯವನ್ನು ಹತ್ತಾರು ಬಾರಿ ತೆಗೆದುಕೊಂಡರೂ ರೋಸಿನಿಗೆ ತೃಪ್ತಿಯಿಲ್ಲ.

ಹಿಂದಿನ ದಿನದ ಸಿದ್ಧ ಕೃತಿಯನ್ನ ಮಾರನೆಯ ದಿನ ಪ್ರೊಜೆಕ್ಟರ್‌ನಲ್ಲಿ (Projector) ಹಾಕಿ ನೋಡಿ,

"ಕಸ - ಕಸ - ಎಲ್ಲವೂ ಕಸ"

ಎಂದು ಮೇಲಕ್ಕೆದ್ದು ಮತ್ತೆ ಮತ್ತೆ ಅದೇ ದೃಶ್ಯವನ್ನು ತೆಗೆದುಕೊಳ್ಳುವರು.

ಒಂದು ಸಾವಿರ ಅಡಿಗಳನ್ನು ಅವರು ಅಂಗೀಕರಿಸಬೇಕಾದರೆ (O. K) ಒಂದು ಲಕ್ಷ ಅಡಿಗಳಷ್ಟು ಷೂಟಿಂಗ್ ಆಗಿರುತ್ತಿತ್ತು.

ತಾವು ದುಡಿಯುತ್ತಿದ್ದಂತೆಯೇ, ಎಲ್ಲರನ್ನೂ ದುಡಿಸಿಕೊಳ್ಳುತ್ತಿದ್ದರು.

ಕೆಲಸಗಾರ ತುಸು ಆಲಸ್ಯ ತೋರಿದರೆ,

'ಯಾಕೆ ಸ್ಮಿತ್ - ನಿನಗೇನಾಗಿದೆ ?'

'ಏನೂ ಇಲ್ಲ ಸಾರ್ - ಸ್ವಲ್ಪ ಆಯಾಸವಾಗಿದೆ.'

ಅವನ ಕೆಗೆ ಒಂದು ಹಿಡಿ ನೋಟುಗಳನ್ನು ತುಂಬಿ ರೋಸಿನಿ.

'ಹೋಗು . ಚೆನ್ನಾಗಿ ಕುಡಿದು, ಮನೆಗೆ ಹೋಗಿ ಮಲಗಿದ್ದು ನಾಳೆ ಕೆಲಸಕ್ಕೆ ಬಾ' ಎಂದು ಹೇಳುತ್ತಿದ್ದರು.

ಕೆಲಸಗಾರರ ಬಗ್ಗೆ ರೋಸಿನಿ ತೋರುತ್ತಿದ್ದ ದೈವಿಕಾನುಕಂಪ, ಅವರ ಭಕ್ತಿಗೌರವಕ್ಕೆ ಸುಭದ್ರವಾದ ಬುನಾದಿ ಹಾಕಿತ್ತು.

ಒಂದು ದಿನ ಷೂಟಿಂಗ್ ನಡೆದಿತ್ತು.

ಅಂದಿನ ಕೆಲಸ ರೋಸಿನಿಯವರಿಗೇ ತೃಪ್ತಿಯನ್ನುಂಟುಮಾಡಿತ್ತು.

ಎಂಟು ಗಂಟೆಗಳ ಕೆಲಸದ ಅವಧಿ ಮುಗಿಯಲು, ಪ್ರೊಡಕ್ಷನ್ ಚೀಫ್ (Production chief)

"ಪ್ಯಾಕ್ ಅಪ್ (Pack up)" ಎಂದರು.

"ಸ್ವಲ್ಪ ತಡಿ ಹೆನ್ರಿ"

ಎಂದು ಕ್ಯಾಮರಾಮನ್ ಓಫ್ಲಾಹರ್ಟಿ (O' Flaherty) ಬಳಿಗೆ ಬಂದ ರೋಸಿನಿ,

"ಫ್ಲಾ, ನಾನು ಒಳ್ಳೆಯ ಮೂಡ್‌ನಲ್ಲಿದ್ದೇನೆ (mood) – ಇನ್ನೊಂದು ಷಿಫ್ಟ್ (Shift) ಕೆಲಸ ಮಾಡೋಣವೇ ?"

ತಲೆ ಕೆರೆದುಕೊಳ್ಳುತ್ತ ನಿಂತ, ಓಫ್ಲಾ ಹರ್ಟಿ,

ನಾನು ಸಂತೋಷವಾಗಿ ಒಪ್ಪಿಕೊಳ್ಳುತ್ತಿದ್ದೆ ಬಾಸ್. ಆದರೆ ಇವತ್ತು ನನ್ನ ಹೆಂಡತಿಯನ್ನು ಡ್ಯೂಟನ್ನನ ಹೊಸ ನಾಟಕ ನೋಡಲು ಕರೆದುಕೊಂಡು ಹೋಗುವುದಾಗಿ ಹೇಳಿ ಬಂದಿದ್ದೇನೆ. ಎರಡು ರಿಸರ್ವೇಷನ್‌ಗಳನ್ನೂ ತೆಗೆದುಕೊಂಡಿದ್ದೇನೆ.

ಎನ್ನಲು ರೋಸಿನಿ ನಸುನಗುತ್ತಾ, ಮರುಮಾತಾಡದೆ,

"ಹ್ಯಾವ್ ಎ ಗುಡ್ ಟೈಂ ಫ್ಲಾ (Have a good time Fla)"

ಎಂದವರೇ 'ಪ್ಯಾಕ್ ಅಪ್ (Pack up)' ಎಂದು ಆಜ್ಞೆ ಮಾಡಿದರು.

'ರಾಜ ಹಂಸ' (Royal Swan) ಚಿತ್ರದ ಕೆಲವು ಭಾಗಗಳು ಮುಗಿದು ಕಥೆ ಒಂದು ಘಟ್ಟಕ್ಕೆ ಮುಟ್ಟಿತು.

ದೊಡ್ಡ ಸೆಟ್ಟಿನಲ್ಲಿ ಅದು ಷೂಟಿಂಗ್ - ಬರೀ ಕ್ರೇನ್ ಷಾಟ್‌ಗಳಲ್ಲೇ (Crane shots) ಆ ದೃಶ್ಯವನ್ನು ತೆಗೆದುಕೊಳ್ಳಲು ನಿರ್ಧರಿಸಿದ್ದ ಓಫ್ಲಾಹರ್ಟಿ, ಅದಕ್ಕಾಗಿ ವಿಪರೀತ ಶ್ರಮಿಸಿದ್ದ.

ಕಥಾಭಾಗವನ್ನ ಸಾಭಿನಯ ಸಮೇತ ಮೋಹಿನಿ ಮತ್ತು ಗಿಲ್ಬರ್ಟನಿಗೆ ರೋಸಿನಿಯವರು ವಿವರಿಸಿದರು.

'ರಾಜಕುಮಾರಿಗೆ ವಿವಾಹ ನಿಶ್ಚಯವಾಗಿದೆ. ಅವಳು ಮೆಚ್ಚಿದ ವರನಿಗೇ ಅವಳನ್ನು ಕೊಡಲು ರಾಜ ರಾಣಿ ನಿರ್ಧರಿಸುತ್ತಾರೆ. ಲಗ್ನಮಂಟಪಕ್ಕೆ ಸಾಲಂಕೃತನಾಗಿ ವರ, ವೈಭವೋಪೇತವಾಗಿ ಆಗಮಿಸುತ್ತಾರೆ.

ಲಗ್ನವಿಧಿಗಳು ಆರಂಭಿಸುವಷ್ಟರಲ್ಲಿ ಆಕಾಶದಲ್ಲಿ ಭಯಂಕರ ಶಬ್ದವಾಗುತ್ತದೆ. ಆ ಶಬ್ದಕ್ಕೆ ಹೆದರಿ ಆಮಂತ್ರಿತರು ಮೂರ್ಛೆಗೊಳ್ಳುತ್ತಾರೆ.

ಅಂಧಕಾರ ಕವಿಯುತ್ತದೆ.

ಅಮಾನುಷ ರೂಪವೊಂದು ಕಾಣಿಸಿಕೊಂಡು, ರಾಜಕುಮಾರಿಯನ್ನು ಹೊತ್ತುಕೊಂಡು ಹೋಗುತ್ತದೆ.'

ಕಥಾವಸ್ತುವಿನ ದೃಷ್ಟಿಯಿಂದ ಈ ದೃಶ್ಯ ನಾಯಕಿಯ ಅಭಿನಯ ಚಾತುರ್ಯ ಪ್ರದರ್ಶನಕ್ಕೆ ಅತ್ಯುತ್ತಮ ಅವಕಾಶ ಕಲ್ಪಿಸಿತ್ತು.

ಮೋಹಿನಿ ಈ ದೃಶ್ಯದಲ್ಲಿ ಉತ್ತಮ ಅಭಿನಯ ತೋರಿ ಯಶಸ್ಸುಗಳಿಸಬೇಕೆಂಬುದು ರೋಸಿನಿಯವರ ಮಹದಾಶಯವಾಗಿತ್ತು.

ನೂರಾರು ದೀಪಗಳು ಸೆಟ್ಟಿನಲ್ಲಿ ಬೆಳಗುತ್ತಿದ್ದವು.

ಇಪ್ಪತ್ತು ಕ್ಯಾಮೆರಾಗಳು ಸಿದ್ಧವಾಗಿದ್ದವು.

ಮೋಹಿನಿ ಗಿಲ್ಬರ್ಟ್, ಮತ್ತು ಸಹನಟರಿಗೆ ಹಲವು ರಿಹರ್ಸಲ್ ಕೊಟ್ಟ ಮೇಲೆ ರೋಸಿನಿ, ಮಾನಿಟರ್ (monitor) ಹೇಳಿದರು.

ಮಾನಿಟರ್ ಪರೀಕ್ಷೆ ಮುಗಿದ ಮೇಲೆ ರೋಸಿನಿ,

"ಕ್ಯಾಮರಾ ರೆಡಿ" ಎಂದರು.

"ಎಸ್ ಸರ್."

"ಸೌಂಡ್ ರೆಡಿ"

"ಎಸ್ ಸರ್."

"ಷೂಟ್ (Shoot)"

ಷೂಟ್ ಆರಂಭವಾದ ಹತ್ತು ಕ್ಷಣಗಳಲ್ಲಿ ರೋಸಿನಿ 'ಕಟ್' ಎಂದರು. ಕ್ಯಾಮೆರಾಗಳು ಸ್ತಬ್ಧವಾದವು.

ತಮ್ಮ ಬಳಿಗೆ ಮೋಹಿನಿ, ಗಿಲ್ಬರ್ಟ್‌ರನ್ನು ಬರಮಾಡಿಕೊಂಡು, ದೃಶ್ಯವನ್ನು ಮತ್ತೆ ವಿವರಿಸಿ,

"ಮನಸ್ಸಿಟ್ಟು ಅಭಿನಯಿಸಿ" ಎಂದರು.

ಎರಡನೆಯ ಬಾರಿ ಆರಂಭಿಸಿದ ಷಾಟ್ ಕೂಡ ಅರ್ಧದಲ್ಲಿಯೇ ರೋಸಿನಿಯವರ ಕತ್ತರಿಪ್ರಯೋಗ ಅನುಭವಿಸಬೇಕಾಯಿತು.

ಹದಿನಾರು ಷಾಟ್‌ಗಳಾದವು.

ಕೆಂಡಕೆಂಡವಾಗಿದ್ದ ರೋಸಿನಿ ಮೋಹಿನಿಯ ಬಳಿಗೆ ಬಂದವರೇ, ಅವಳ ಕಪಾಳಕ್ಕೆ ಒಂದು ಏಟು ಬಿಗಿದು,

"ಯು ಲಿಟಲ್ ಫೂಲ್, ವೈ ಡೋಂಟ್ ಯು ಪುಟ್ ಸಮ್ ಲೈಫ್ ಇನ್‌ಟು ದಿ ಆಕ್ಟ್ (you little fool – why don't you put some life into the act)" ಎಂದರು.

ಅವರ ಭೀಮಕೋಪ ಕಂಡು ಇಡಿಯ ಸ್ಟೂಡಿಯೋ ನಡುಗಿತು.

ಮೋಹಿನಿ ವಿಶ್ರಮಿಸಿಕೊಳ್ಳಲು ಐದು ನಿಮಿಷ ಕರುಣಿಸಿದ ರೋಸಿನಿ,

"ಕ್ಯಾಮೆರಾ ರೆಡಿ" ಅಂದರು.

"ಎಸ್ ಸರ್."

"ಮಾನಿಟರ್ !"

ಮಾನಿಟರ್ ತೆಗೆದುಕೊಂಡ ಮೇಲೆ

“ಷೂಟ್” ಎಂದರು.

ಮನೆಗೆ ಸಪ್ಪೆಮೋರೆ ಹಾಕಿಕೊಂಡು ಬಂದ ಮೋಹಿನಿಯನ್ನು ಫಿಲ್ಲಿಸ್,

"ಏಕೆ ಡಿಯರ್ ಮೋ - ಏನಾಯಿತು ?" ಎಂದು ಕೇಳಿದಳು.

ಮೋಹಿನಿ ಕಂಬನಿದುಂಬಿ ಸ್ಟೂಡಿಯೋದಲ್ಲಿ ನಡೆದಿದ್ದ ಪ್ರಕರಣ ವಿವರಿಸುತ್ತಾ,

"ಎಲ್ಲರ ಎದುರಿಗೂ ನನಗೆ ಅನಮಾನ ಮಾಡಿಬಿಟ್ಟರು ಫಿಲ್ಲಿಸ್" ಎಂದಳು.

ಫಿಲ್ಲಿಸ್ ನಗುತ್ತಾ,

"ಇದು ಅವರ ವಿಷಯದಲ್ಲಿ ಸರ್ವಸಾಮಾನ್ಯ ಡಿಯರ. ರೋಸಿನಿ ಅವರನ್ನು ತಪ್ಪು ತಿಳಿದುಕೂಳ್ಳಬೇಡಿ."

"ನನಗೆ ತುಂಬ ಆಯಾಸವಾಗಿದೆ ಫಿಲ್ಲಿಸ್ - ಹೋಗಿ ಮಲಗುತ್ತೇನೆ."

"ಬರಿ ಹೊಟ್ಟೆಯಲ್ಲಿ ಮಲಗಬೇಡಿ - ಸ್ವಲ್ಪ ಊಟಮಾಡಿ."

ಎಂದು ಮೋಹಿನಿಯನ್ನೆಬ್ಬಿಸಿ ಬಡಿಸಿದಳು.

ಊಟ ಮುಗಿದೊಡನೆಯೇ ಮೋಹಿನಿ ತನ್ನ ರೂಮಿಗೆ ಹೋಗಿ ಮಲಗಿದಳು.

ಫಿಲ್ಲಿಸ್, ರೋಸಿನಿಯವರ ದಾರಿ ಕಾಯುತ್ತ ಕುಳಿತಳು.

ಸುಮಾರು ಹನ್ನೊಂದು ಗಂಟೆಗೆ ಮನೆಗೆ ಬಂದ ರೋಸಿನಿ,

"ಮೋ ಮನೆಗೆ ಒಂದಳೇ ಫಿಲ್ಲಿಸ್"

ಎಂದು ಕೇಳಿದರು.

"ಆಗಲೇ ಬಂದರು - ಆಯಾಸವಾಗಿದೆಯೆಂದು ಹೇಳಿ ಮಲಗಿದರು."

ನನಗೊಂದು ಡ್ರಿಂಕ್ ಕೊಡು ಫಿಲ್ಲಿಸ್

"ಕಂಠಪೂರ್ತಿ ತೆಗೆದುಕೊಂಡೇ ಬಂದಿದ್ದೀರಿ. ಇನ್ನೂ ಡ್ರಿಂಕ್ಸ್ ಬೇಕು."

"ಇನ್ನು ಒಂದೇ ಒಂದು !"

"ಸ್ವಲ್ಪ ಊಟಮಾಡುವ ಹಾಗಿದ್ದರೆ ಕೊಡುತ್ತೇನೆ."

ರೋಸಿನಿ ಒಪ್ಪಲು ಅವನಿಗೆ ಡ್ರಿಂಕ್ ಬೆರಸಿಕೊಟ್ಟು, ಬಡಿಸಿದಳು,

ಡ್ರಿಂಕ್ ಮುಗಿಸಿದ ರೋಸಿನಿ ಸಾವಕಾಶವಾಗಿ ಊಟಮಾಡುತ್ತ ಕುಳಿತರು

ಅವರ ಎದುರಿಗೆ ಕುಳಿತಿದ್ದ ಫಿಲ್ಲಿಸ್ ಮೆಲ್ಲನೆ,

"ಮಿ. ರೊಸಿನಿ - ನೀವು ಕರಡಿಯಾಗಿ ಹುಟ್ಟಬೇಕಾಗಿತ್ತು" ಎಂದಳು.

ರೋಸಿನಿ ನಗುತ್ತಾ

"ಯಾವ ಕರಡಿ ಫಿಲ್ಲಿಸ್ - ಉತ್ತರಧೃವದ ಕರಡಿಯೋ?"

"ಕೆಲಸಗಾರರ ಮುಂಡೆ ಮೋನನ್ನೇಕೆ ಅಸಮಾನಗೊಳಿಸಿದಿರಿ."

ಗಂಭೀರವದನರಾದ ರೋಸಿನಿ,

"ಮೋ ತಪ್ಪು ಮಾಡಕೂಡದು. ಅವಳ ಒಂದು ಷಾಟನ್ನು ನಾನು ಹದಿನಾರು ಸಲ ತೆಗೆದುಕೊಂಡಿದ್ದೆ ಫಿಲ್ಲಿಸ್."

"ಮೋ ಅನನಭವಿಕರು - ನಿಮ್ಮ ಶರವೇಗದೊಂದಿಗೆ ಸಾಗಬೇಕೆಂದರೆ ಅವರಿಗೆ ಹೇಗೆ ಸಾಧ್ಯ?"

"ಇನ್ನುಮೇಲೆ ನನ್ನ ಭಾವನಾವೇಶವನ್ನು ಪ್ರಯತ್ನಿಸುತ್ತೇನೆ ಫಿಲ್ಲಿಸ್ - ಐ ಆಮ್ ಸಾರೀ (I am Sorry)"

ಊಟ ಮುಗಿಸಿದ ರೋಸಿನಿ ಮೆಲ್ಲನೆ ತಮ್ಮ ರೂಮುಸೇರಿ ಶಬ್ದವಾಗದಂತೆ ದೀಪ ಹಚ್ಚಿದರು.

ಎಡಮಗ್ಗುಲಾಗಿದ್ದ ಮೋಹಿನಿ, ಕೈಗೆ ತಲೆಕೊಟ್ಟುಕೊಂಡು ನಿದ್ರಿಸುತ್ತಿದ್ದಳು."

ನೈಟ್ ಡ್ರಸ್ (Night Dress) ಧರಿಸಿದ ರೋಸಿನಿ, ಮೆಲ್ಲನೆ ಮೋಹಿನಿಯ ಮಂಚದ ಬಳಿಗೆ ಹೋಗಿ ನಿಂತು ಅವಳನ್ನೇ ಎವೆಯಿಕ್ಕದೆ ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿ, ಮೆಲ್ಲನೆ

"ಮೋ - ಡಾರ್ಲಿಂಗ್" ಎಂದರು.

ಮೋಹಿನಿಗೆ ಅದೆ ಎಚ್ಚರ, ಅದೆ ಜಾಗ್ರತಿ.

"ನಿದ್ರೆ ಬಂದಿದೆಯೋ ಮೋ - ಡಾರ್ಲಿಂಗ್"

ಮೋಹಿನಿ ಮೆಲ್ಲನೆ ಕಣ್ಣುಬಿಟ್ಟಳು.

"ಐ ಆಮ್ ಸಾರಿ ಡಾರ್ಲಿಂಗ್ - ಐ ಬಿಹೇವ್ಡ್ ಲೈಕ್ ಎ ಬೀಸ್ಟ್ (I am sorry darling – I behaved like a beast)"

"ನನ್ನನ್ನು ಕ್ಷಮಿಸಿ ಆಲ್ಬರ್ಟೋ - ಇನ್ನುಮೇಲೆ ಹೆಚ್ಚು ದಕ್ಷತೆಯಿಂದ ನನ್ನ ಕೆಲಸ ನಿರ್ವಹಿಸುತ್ತೇನೆ."

ಅವಳ ಮಂಚದಂಚಿನಲ್ಲಿ ಕುಳಿತ ರೋಸಿನಿ, ಅವಳನ್ನು ನೇವರಿಸುತ್ತಾ,

“’ಸೆಟ್ ಮೇಲೆ’ ನಿಂತರೆ ನನ್ನ ಮೈಮೇಲೆ ಪ್ರಜ್ಞೆಯೇ ಇರುವುದಿಲ್ಲ ಮೋ - ಫಿಲ್ಲಿಸ್ ಹೇಳಿದಂತೆ ನಾನು ಕರಡಿಯಾಗಿ ಬಿಡುತ್ತೇನೆ, ಆದರೆ ನಾನು ಕೋಪಮಾಡಿಕೊಳ್ಳುವುದೂ ನನ್ನ ಉತ್ಕರ್ಷಕ್ಕಾಗಿ ಮೋ.”

“ಅದನ್ನು ನಾನು ಬಲ್ಲೆ ಡಿಯರ್. ಸ್ಟುಡಿಯೋ ಸೇವಕರ ಮುಂದೆ ನನಗೆ ಅಪಮಾನವಾಯಿತಲ್ಲಾ ಎಂದು ಬೇಸರನಾಯಿತಷ್ಟೆ”

ಎಂದು ಕೈಗಳನ್ನು ನೀಡಿ,

“ಬನ್ನಿ” ಎಂದಳು.

ಅವಳ ಪಕ್ಕದಲ್ಲಿ ಮಲಗಿದ ರೋಸಿನಿ,

“ಈ ಧಾವತಿ ಕಳೆದ ಮೇಲೆ ಒಂದು ಕೆಲಸ ಮಾಡೋಣ ಮೋ.”

“ಏನದು?”

“ಇಬ್ಬರೂ ರಿವೇರಾಗೋ, ಮಿಯಾಮೀಗೋ ಹೋಗಿ ಒಂದು ತಿಂಗಳು ವಿಶ್ರಾಂತಿ ತೆಗೆದುಕೊಳ್ಳೋಣ”

“ಚಿತ್ರ ಮುಗಿದ ಕೂಡಲೆ ಹೋಗೋಣ.”

“ಚಿತ್ರ ಮುಗಿದ ಕೂಡಲೆ ಆಗುವುದಿಲ್ಲ ಮೋ. - ನಾನೇ ಎಡಿಟಿಂಗ್ ಮಾಡಬೇಕಾಗುತ್ತದೆ. ವಿಶ್ವದ ಎಲ್ಲಾ ಪ್ರಮುಖ ನಗರಗಳ ಪ್ರದರ್ಶನಕ್ಕೆ ವ್ಯವಸ್ಥೆ ಮಾಡಬೇಕಾಗುತ್ತದೆ ಮತ್ತು ಹಾಲಿವುಡ್ಡಿನಲ್ಲಿ ಪ್ರಥಮ ಪ್ರದರ್ಶನದ ದಿನ ನಾನೂ ನೀನೂ ಇರಲೇಬೇಕು.”

“ಏಕೆ?”

“ಅಂದು ಚಿತ್ರ, ಸಂಗೀತ, ಸಾಹಿತ್ಯರಾಜಕೀಯ ಪ್ರಪಂಚದ ಎಲ್ಲ ಹಿರಿಯರೂ ಬರುತ್ತಾರೆ. ಅವರ ಅಭಿನಂದನೆ ಸ್ವೀಕರಿಸುವುದಕ್ಕೆ ಇರಬೇಕು.”

“ಹಾಲಿವುಡ್ಡಿನ ಪ್ರಥಮ ಪ್ರದರ್ಶನ ಮುಗಿದಕೂಡಲೆ ಹೋಗೋಣವೇ.”

“ಅಗತ್ಯವಾಗಿ”

ಎಂದು ರೋಸಿನಿ ಹೇಳಿದರು.

ಒಂದಾಗುತ್ತಲೇ ಒಂದು ಹದಿನೆಂಟು ತಿಂಗಳು ಉರುಳಿದವು.

'ರಾಜಹಂಸ' (Royal Swan) ಚಿತ್ರದ ಷೂಟಿಂಗ್ ಮುಗಿದು ಎಡಿಟಿಂಗ್ ಆರಂಭವಾಗಿತ್ತು.

ಬೃಹತ್ - ಪ್ರಮಾಣದಲ್ಲಿ ಪ್ರಕಟನಕಾರ್ಯ ಕೈಗೊಳ್ಳಲು ರೋಸಿನಿ, ಗೇಲ್ ಪ್ಯಾಟ್ರಿಕ್‌ಗೆ ಅಧಿಕಾರ ಕೊಟ್ಟಿದ್ದರು.

ಜಗತ್ತಿನ ಎಲ್ಲಾ ಮುಖ್ಯ ಪಟ್ಟಣಗಳಲ್ಲಿಯೂ ಭಾರತದ ನೂರು ಪಟ್ಟಣಗಳಲ್ಲಿಯೂ ಒಂದೇ ದಿನ ಆರಂಭವಾಗಲು ಸಕಲ ವ್ಯವಸ್ಥೆಯಾಯಿತು.

ಪ್ರದರ್ಶನ ಪೂರ್ವ ವಿಶ್ವದ ಎಲ್ಲ ಭಾಷಾ ಪತ್ರಿಕೆಗಳೂ ಚಿತ್ರದ 'ಸಚಿತ್ರ ಪುರವಣಿ' ಹೊರಡಿಸಲು ಏರ್ಪಾಟಾಯಿತು.

ಚಿತ್ರದ ಕೊನೆಯ ಪ್ರತಿ (Final print) ಸಿದ್ಧವಾಗಲು ರೋಸಿನಿ, ಎಲ್ಲ ನಟ ನಟಿಯರು, ತಂತ್ರವಿಶಾರದರು ಕೆಲಸಗಾರರನ್ನು ಬರಮಾಡಿಕೊಂಡು 'ಹಾಲಿವುಡ್ ಮೋಷನ ಪಿಕ್ಚರ್ ಥಿಯೇಟರ್'ನಲ್ಲಿ ಪ್ರದರ್ಶನ ಏರ್ಪಡಿಸಿದರು. ಅದೇ ರಾತ್ರಿ ಸಮಸ್ತರಿಗೂ ದಿವ್ಯ ಔತಣವಾಯಿತು.

ಮಾರನೆಯ ದಿನ ರೋಸಿನಿ ಎಲ್ಲ ಕಲಾವಿದರ, ತಂತ್ರಜ್ಞರ ಕರಾರಿನಂತೆ ಅವರ ವೇತನ, ಗೌರವಧನ, ಸಂಬಳ ಬಿಡಿಕಾಸು ಬಾಕಿ ಇಲ್ಲದಂತೆ ಪಾವತಿ ಮಾಡಿದರು.

ತನ್ನ ಕೈಸೇರಿದ ಚೆಕ್ ನೋಡಿದ ಮೋಹಿನಿ ಆಶ್ಚರ್ಯಗೊಂಡು,

"ನನಗೇತಕ್ಕೆ ಸಂಭಾವನೆ" ಎಂದಳು.

"ಹಾಗಂದರೇನು? ನೀನು ಕೆಲಸ ಮಾಡಲಿಲ್ಲವೇ?"

"ನಾನು ನೌಕರಳಂತೆ ಕೆಲಸ ಮಾಡಲಿಲ್ಲ."

"ಎಲ್ಲರೂ ನೌಕರರಂತೆಯೇ ಕೆಲಸ ಮಾಡಬೇಕು. ನಾನೂ ಒಬ್ಬ ನೌಕರನೇ – ನನ್ನ ಸಂಬಳವನ್ನು ತೆಗೆದುಕೊಂಡಿದ್ದೇನೆ"

ಎಂದವಳ ಬಾಯಿ ಮುಚ್ಚಿದರು.

ಒಂದು ದಿನ ಯಥಾಕ್ರಮದಂತೆ ಐದುಗಂಟೆಗೇ ಎದ್ದ ಲೋಕಾಭಿರಾಮ, ವಾಕಿಂಗ್ ಹೊರಟು, ಹೋಟಿಲಿನಲ್ಲಿ ಒಂದು ಕಾಫಿ ಕುಡಿದು, ಮನೆಗೆ ಹಿಂದಿರುಗಿದ.

ಸರೋಜ ಒಂದು ಕಪ್ ಕಾಫಿ ಮಾಡಿ ತಂದು ಅವನ ಕೈಗಿತ್ತಳು.

ಲೋಕಾಭಿರಾಮ ಕಾಫಿ ಕುಡಿಯುತ್ತ,

"ತಿಂಡಿ ಏನು ಮಾಡುತ್ತೀ ಸರೋಜ" ಎಂದ.

"ಮಾಡುವುದಕ್ಕೇನಿದೆ. ರೊಟ್ಟಿ ಮಾಡುವುದಕ್ಕೆ ಅಕ್ಕಿ ಹಿಟ್ಟು ಇಲ್ಲ; ಉಪ್ಪಿಟ್ಟು ಮಾಡುವುದಕ್ಕೆ ರವೆ, ತುಪ್ಪ ಇಲ್ಲ. ನೀವೇ ಹೋಗಿ ಹೋಟಲಿನಲ್ಲಿ ನಾಲು ಇಡ್ಲಿ ಕಟ್ಟಿಸಿಕೊಂಡು ಬನ್ನಿ" ಎಂದಳು.

ಸ್ನಾನ ಮಾಗಿಸಿಕೊಂಡು ಹೊರಬಿದ್ದ ಲೋಕಾಭಿರಾಮ, ಅಪ್ಪಣ್ಣ ಹೋಟಲಿಗೆ ಹೋಗಿ ನಾಲ್ಕು ಇಡ್ಡಲಿ, ಪಲ್ಯ, ಬೆಣ್ಣೆ ಕಟ್ಟಿಸಿಕೊಂಡು, ಚೌಕದಲ್ಲಿದ್ದ ಅಯ್ಯರ್ ನ್ಯೂಸ್ ಸ್ಟಾಲ್‌ಗೆ (Iyer's News Stall) ಹೋಗಿ ಅಂದಿನ 'ಪ್ರಜಾವಾಣಿ' ಪತ್ರಿಕೆಯ ಸಂಚಿಕೆಯನ್ನು ಕೊಂಡು ಪುಟ ತೆರೆದು ನೋಡಿದ.

ದೈನಂದಿನ ಪತ್ರಿಕೆಯ ಮಧ್ಯೆಯಿದ್ದ ಪುರವಣಿ ಅವನನ್ನು ಆಕರ್ಷಿಸಿತು. ನಾಲ್ಕು ಕಾಲಮ್ ಬ್ಲಾಕಿನ ಕಳಗೆ 'ಭಾರತಕ್ಕೆ ಕೀರ್ತಿ ತಂದ ಕಲಾವಿದೆ – ಮೋಹಿನಿ' ಎಂದಿದ್ದುದನ್ನು ಕಂಡ ಲೋಕಾಭಿರಾಮ, ಇತರ ಕೆಲವು ಪತ್ರಿಕೆಗಳನ್ನು ಕೊಂಡು ಕೊಂಡ.

ಮನೆಗೆ ಹಿಂದಿರುಗಿದ ಗಂಡನ ಉದ್ವೇಗ ಕಂಡ ಸರೋಜ, ಅವನ ಕೈಯಿಂದ ತಿಂಡಿಪೊಟ್ಟಣ ತೆಗೆದುಕೊಂಡು,

"ಪೇಪರ್ ಅಂಗಡಿಯನ್ನೇ ಖರೀದಿ ಮಾಡಿದ್ದೀರಲ್ಲಾ" ಎಂದಳು.

"ಸುಮ್ಮನೆ ಇರೇ - ನಿನಗೇನು ಗೊತ್ತು"

ಎಂದು ಅವಳು ಕೊಟ್ಟ ಇಡ್ಡಲಿ ನುಂಗಿ, ಸ್ವಲ್ಪವೂ ವಿಳಂಬಮಾಡದೆ ಮನೆಬಿಟ್ಟು ಹೊರಟ.

'ದಿಲ್‌ರುಬಾ' ಬಂಗಲೆಯ ಪೋರ್ಟಿಕೋದಲ್ಲಿ ಸಾಹುಕಾರರ ಕಾರು ನಿಂತಿತ್ತು. ಡ್ರೈವರ್ ಸಿದ್ದಪ್ಪ, ಷಾಮ್ವಾಚರ್ಮದಿಂದ (Shamois leather) ಕಾರಿನಗಾಜುಗಳನ್ನು ಒರಸುತ್ತಿದ್ದ.

ಪೋರ್ಟಿಕೋಗೆ ಬಂದ ಲೋಕಾಭಿರಾಮ,

"ಇದೇನು ಸಿದ್ದಣ್ಣ - ಸಾಹುಕಾರರು ಎಲ್ಲಿಗಾದರೂ ಹೊರಟಿದ್ದಾರೇನು?" ಎಂದು ಕೇಳಿದ.

"ಗೊತ್ತಿಲ್ಲ ಲೋಕಾಭಿರಾಮಪ್ಪ- ಕಾರ್ ತಗಂಡು ಬಾ ಅಂದ್ರು......"

ಸಾಹುಕಾರರ ಆಫೀಸ್‌ರೂಮಿಗೆ ಬಂದ ಲೋಕಾಭಿರಾಮ ಅವರೆದುರು ಕುಳಿತ.

ಕತ್ತೆತ್ತಿ ನೋಡಿದ ಸಾಹುಕಾರರು,

"ಇದೇನೋ ಇಷ್ಟು ಬೇಗ ಬಂದುಬಿಟ್ಟೆ" ಎಂದರು.

ಲೋಕಾಭಿ ಉತ್ತರಿಸದೆ 'ಪ್ರಜಾವಾಣಿ' ಪತ್ರಿಕೆಯ ಪುರವಣಿಯನ್ನು ಅವರ ಮುಂದಿಟ್ಟ.

ಸಾಹುಕಾರರು ಪತ್ರಿಕೆಯನ್ನವಲೋಕಿಸಲು, ಲೋಕಾಭಿ ಉಳಿದ ಪತ್ರಿಕೆಗಳನ್ನು ಅವರ ಮುಂದಿಟ್ಟ.

ಸಾಹುಕಾರರು ಎಲ್ಲ ಪತ್ರಿಕೆಗಳ ಸಿಂಹಾನಲೋಕನ ಮಾಡಿ,

"ರಾಜಹಂಸ ಚಿತ್ರದ ಮೊದಲನೆಯ ದಿನದ ಮೊದಲನೆಯ ಪ್ರದರ್ಶನಕ್ಕೆ ಒಂದು ಬಾಲ್ಕನಿ (Balcony) ರಿಸರ್ವ್ ಮಾಡು ಲೋಕಾಭಿ" ಎಂದರು.

ಸಾಹುಕಾರರ ನಿರ್ವಿಕಲ್ಪಭಾವನೆ ಕಂಡು ಅಚ್ಚರಿಗೊಂಡ ಲೋಕಾಭಿ,

"ನಾನು ಮದರಾಸಿನಲ್ಲಿ ಹೇಳಿದ್ದು ನಿಜವಾಯಿತು ?" ಎಂದ.

"ಏನು ಹೇಳಿದ್ದೆ"

"ಮೋಹಿನಿ ಕೈ ಕೊಡುತ್ತಾರೆಂದು........"

"ಅವಳೆಲ್ಲಿ ಕೈ ಕೊಟ್ಟಳು ?"

ಪತ್ರಿಕೆಗಳ ರಾಶಿಯ ಕಡೆ ಕೈ ತೋರಿಸುತ್ತಾ ಲೋಕಾಭಿರಾಮ,

"ಇನ್ನೇನು ಸ್ವಾಮಿ - ಇದರ ಅರ್ಥ ?" ಎಂದು ಕೇಳಿದ.

ಸಾಹುಕಾರರು ನಗುತ್ತಾ,

"ಟಂಕಸಾಲೆಯಲ್ಲಿ ನಾಣ್ಯಗಳನ್ನು ನಿರ್ಮಾಣಮಾಡಿ, ಚಲಾವಣೆಗೆ ಹೊರಗೆ ಕಳಿಸುತ್ತಾರೆ. ಅವು ಕೈಯಿಂದ ಕೈಗೆ ಬಿದ್ದು ಸವೆದು ಹೋಗುತ್ತವೆ - ಸವೆದ ನಾಣ್ಯಗಳನ್ನು ಏನು ಮಾಡುತ್ತಾರೆ ಲೋಕಾಭಿ?"

"ಏನು ಮಾಡುತ್ತಾರೆ ಸ್ವಾಮಿ?"

"ಮತ್ತೆ ಟಂಕಸಾಲೆಗೆ ಕಳಿಸುತ್ತಾರೆ."

"ಅಂದರೆ….."

"ಅಂದರೆ – ಮೋಹಿನಿ ಪೂರ್ವ ಸ್ಥಾನಕ್ಕೇ ಮತ್ತೆ ಬರುತ್ತಾಳೆ."

"ನೀವು ಅವರನ್ನು….."

“ಟಂಕಸಾಲೆಗೆ ಹಿಂದಿರುಗಿದ ಸವೆದ ನಾಣ್ಯಗಳನ್ನು ಏನು ಮಾಡುತ್ತಾರೆ ಹೇಳು”

“ಬೆಂಕಿಗೆ ಹಾಕಿ ಕರಗಿಸುತ್ತಾರೆ.”

“ರೈಟ್ (Right)”

ಲೋಕಾಭಿರಾಮ ಒಂದು ಪತ್ರಿಕೆಯನ್ನೆಳೆದುಕೊಂಡು,

“ ’ಈ ಸುದ್ದಿ ಕೇಳಿ ಸ್ವಾಮಿ -’ ರಾಜಹಂಸ ಚಿತ್ರದ ನಿರ್ಮಾತೃಗಳೂ ದಿಗ್ದರ್ಶಕರೂ ಆದ ಮಿ. ರೋಸಿನಿ, ಮತ್ತು ಅವರ ಪ್ರಧಾನ ನಟಿ ಮಿಸ್. ಮೋಹಿನಿ, ಹಾಲಿವುಡ್ ಪ್ರಿಮ್ಯೂರ್ (Premiere) ಆದಕೂಡಲೆ ಫ್ರೆಂಚ್ ರಿವೇರಾಕ್ಕೆ ವಿಶ್ರಾಂತಿಗಾಗಿ ತೆರಳಲು ಯೋಚಿಸಿದ್ದಾರೆ.”

“ತೆರಳಲಿ ಸಂತೋಷ.”

“ರಷ್ಯಕ್ಕೆ ಮೋಹಿನಿಯನ್ನು ಕಳಿಸಬೇಡಿ ಎಂದು ನಾನು ಬಡಕೊಂಡೆ - ನನ್ನ ಮಾತು ನೀವು ಕೇಳಲಿಲ್ಲ.”

“ಈಗ ನನಗಾದ ನಷ್ಟವೇನೋ ಲೋಕಾಭಿ.”

“ಹೋಗಿ ಸಾಮಿ . ನೀವು........”

ಎಂದು ಲೋಕಾಭಿರಾಮ ಬೇಸರದಿಂದ ನುಡಿದ.

ಹಾಲಿವುಡ್ ಪ್ರಿಮ್ಯೂರ್ ಪೂರ್ಣ ಯಶಸ್ವಿಯಾಗುತ್ತದೆ ಎಂದು ರೋಸಿನಿ ನಿರೀಕ್ಷಿಸಿದ್ದರು. ಅವರ ನಿರೀಕ್ಷೆ ವಿಫಲವಾಗಲಿಲ್ಲ.

ರೋಸಿನಿ ಚಿತ್ರಗಳನ್ನು ನಿರ್ಮಾಣಮಾಡುತ್ತಿದ್ದುದೇ ಅಪರೂಪ. 'ರಾಜಹಂಸ' ಕಥಾವಸ್ತುವನ್ನು ಕುರಿತು ಅವರು ಹತ್ತು ವರ್ಷ ವಿಚಾರ ಮಾಡಿ, ಆ ಹತ್ತುವರ್ಷಗಳ ಸಾಧನೆಯ ಫಲವನ್ನು ಪ್ರೇಕ್ಷಕರಿಗೆ ಕೊಡುವುದರಲ್ಲಿದ್ದರು.

ಸರ್ವಕಾಲೀನ ದಿಗ್ದರ್ಶಕರು, ನಿರ್ಮಾತೃಗಳು, ನಟ ನಟಿಯರು, ಸಂಗೀತಕೋವಿದರು 'ರಾಜಹಂಸ' ಕೃತಿಯನ್ನು ಮೇರುಕೃತಿ ಎಂದು ಹೊಗಳಿದರು. ಚಲನಚಿತ್ರ ಪಿತಾಮಹ ಸಿಸಿಲ್. ಡಿ. ಮಿಲ್ಸ್ ಚಿತ್ರವನ್ನು 'ಸಿಲಲಾಯಿಡ್ ರೂಪದಲ್ಲಿರುವ ಬೈಬಲ್' ಎಂದು ಕರೆದರು; ವರನಟ ರೋನಾಲ್ಡ್ ಕೊಲ್ಮನ್ ಚಿತ್ರವನ್ನು ನಮ್ಮ ಯುಗದ 'ಮಹದ್ಕೃತಿ' ಎಂದು ಕರೆದ; ಪ್ರಸಿದ್ಧ ವಿಲಿಯಂ ವೈಲರ್ ಚಿತ್ರವನ್ನು 'ತಂತ್ರನೈಪುಣ್ಯದ ಪರಮಾವಧಿ' ಎಂದು- ಸ್ತುತಿಸಿದ; ಪ್ರಸಿದ್ಧ ನಿರ್ಮಾತೃ ದಾರುಲ್ ಜಾನಕ 'ಪ್ರತಿಯೊಬ್ಬ ನಿರ್ಮಾತೃವಿಗೂ ಸ್ಪೃಹೆ ಹುಟ್ಟಿಸುವ ಚಿತ್ರ' ಎಂದರು.

ಪ್ರಿಮ್ಯೂರ್ ಆದ ಎರಡು ದಿನಗಳ ತರುವಾಯ ರೋಸಿನಿ - ಮೋಹಿನಿಯೊಂದಿಗೆ ಮಾಂಟಿ ಕ್ಲಾರೋಗೆ ಪ್ರಯಾಣ ಬೆಳಸಿದರು.

ಅಭಿಮಾನಿಗಳಿಂದ ಪಾರಾಗಲು ರೋಸಿನಿ, 'ಗ್ರಿಕ್ಸ್ ಹೋಟೇಲಿ'ನಲ್ಲಿ ಮಿ. ಮತ್ತು ಮಿಸಸ್ ಅಲ್‌ಸ್ಮಿತ್ ಎಂಬ ಹೆಸರಿನಲ್ಲಿ ರಿಜಿಸ್ಟ್ರೇಷನ್ ಮಾಡಿಸಿದರು.

ಮಾಂಟಿಕಾರ್ಲೋ ಸೇರಿದ ಕೆಲವೇ ದಿನಗಳಲ್ಲಿ ಮೋಹಿನಿಗೆ ಮಾಂಟಿಕಾರ್ಲೋದ ನೈಟ್ ಕ್ಲಬ್ಬುಗಳು, ದ್ಯೂತ ಗೃಹಗಳು ಪರಿಚಯವಾಯಿತು.

ವಿಹಾರ ವಿಶ್ರಾಂತಿಗಾಗಿ ರೋಸಿನಿ ಮಾಂಟಿಕಾರ್ಲೋಗೆ ಬಂದಿದ್ದರೂ ಅವರ ಸುಪ್ತಚೇತನ ಮುಂದಿನ ಕೃತಿಯನ್ನು ಕುರಿತು ಬಯಸುತ್ತಿತು.

ಮಾಂಟಿಕಾರ್ಲೋದ ಜೀವನದಲ್ಲಿ ಧುಮ್ಮುಕ್ಕಿದ್ದ ಮೋಹಿನಿಯ ಉದ್ವೇಗ, ಅವಿಶ್ರಾಂತ ಚಟುವಟಿಕೆಗಳಿಗೆ ಹೊಂದಿಕೊಳ್ಳುವುದು ರೋಸಿನಿಯರಿಗೆ ದುಸ್ಸಾಧ್ಯವಾಯಿತು.

ಒಂದೊಂದು ದಿನ ರೋಸಿನಿ ಹೊಟೇಲಿನಲ್ಲೇ ಉಳಿದುಕೊಂಡು,

"ನೀನು ಹೋಗಿ ಬಾ ಮೋಹಿನಿ, ನನಗೆ ಸ್ವಲ್ಪ ಕೆಲಸವಿದೆ."

ಎಂದು ಹೇಳಿಬಿಡುತ್ತಿದ್ದರು.

ಒಂದು ರಾತ್ರಿ ಹೊರಗೆ ಹೋಗಿದ್ದ ಮೋಹಿನಿ, ಮುಂಜಾನೆ ಮೂರು ಗಂಟೆಗೆ ಹೊಟೇಲ್ ರೂಮಿಗೆ ಹಿಂದಿರುಗಿದಳು.

ಮೇಜಿನ ಮೇಲೆ ವಿಸ್ಕಿ ಶೀಷೆ ಗ್ಲಾಸ್ ಇಟ್ಟುಕೊಂಡು ರೋಸಿನಿ ನಕ್ಷೆಗಳನ್ನು ಟಿಪ್ಪಣಿಗಳನ್ನು ಸಿದ್ಧಗೊಳಿಸುತ್ತ ಕುಳಿತ್ತಿದ್ದರು.

"ಇನ್ನೂ ಮಲಗಲಿಲ್ಲವೇ ಆಲ್ಬರ್ಟೋ?"

"ಗಂಟೆಯೆಷ್ಟು, ಮೊ."

"ಮೂರಾಯಿತು."

"ಇವತ್ತು ನಿನ್ನ ಬ್ಯಾಂಕ್ ಹೋಗಿತ್ತು ?"

"ಅದೃಷ್ಟ ಚೆನ್ನಾಗಿರಲಿಲ್ಲ, ಒಂದು ಸಾವಿರ ಡಾಲರ್‌ಗಳನ್ನು ಕಳೆದುಕೊಂಡೆ."

"ಮೋ - ನೀನು ಕಾರ್ಪಣ್ಯಪಟ್ಟುಕೊಳ್ಳ ದೆ ಮನಸ್ಸು ಬಂದಂತೆ ಖರ್ಚುಮಾಡಿಕೊಂಡಿರಬೇಕೆಂಬುದೇ ನನ್ನ ಅಪೇಕ್ಷೆ. ಆದರೆ........"

"ಆದರೆ ಏನು?"

"ಹೀಗೆ ನೀನು ಖರ್ಚುಮಾಡುವುದು ನ್ಯಾಯವಲ್ಲ. ನಾಳೆ ನಿನ್ನ ಕೈ ಬರಿದಾದರೆ ನಿನಗೆ ಹಣ ಒದಗಿಸುವವರು ಯಾರು ?"

"ನೀವು"

"ನಾನೇನು ಕೋಟ್ಯಾಧೀಶ್ವರನೇ?"

"ಹೇಗೂ ಇನ್ನೊಂದು ಚಿತ್ರ ಮಾಡುವಿರಲ್ಲ ಆಲ್ಬರ್ಟೋ?"

"ನನ್ನ ಚಿತ್ರ ನಾಳೆಯೇ ಆಗಬಹುದು. ಇನ್ನು ಹತ್ತು ವರ್ಷಕ್ಕೆ ಆಗಬಹುದು."

ವಿಷಯಾಂತರ ಮಾಡಲಿಚ್ಛಿಸಿದ ಮೋಹಿನಿ

"ನಿಮ್ಮ ಮುಂದಿನ ಚಿತ್ರದ ವಸ್ತು ಯಾವುದು ಆಲ್ಬರ್ಟೋ?"

"ಅದು ಇನ್ನೂ ರಹಸ್ಯ"

"ಹೋಗಿ ರಹಸ್ಯವಂತೆ - ನನಗೆ ಹೇಳಬಾರದೆ ?"

ರೋಸಿನಿ ಅಂತರ್ಮುಖರಾಗಿ

"ಟೆಸ್ಟಮೆಂಟ್‌ಗಳಲ್ಲಿ ನೀನು ಮೇರಿ ಮಾಗ್ದಾಲಾ ಕಥೆ ಓದಿದ್ದೀಯಾ ಮೋ."

“ಓದಿದ್ದೇನೆ.”

“ಯೇಸುಕ್ರಿಸ್ತನ ಮೇಲೆ ಈಗಾಗಲೇ ಕೆಲವು ಉತ್ತಮ ಚಿತ್ರಗಳು ಬಂದಿವೆ. ಸಿಸಿಲಿ. ಡಿ. ಮಿಲ್ಸ್ ಈ ವಸ್ತುವನ್ನು ಕೌಶಲ್ಯದಿಂದ ಚಿತ್ರೀಕರಿಸಿದ್ದಾರೆ. ಮೇರಿ ಮ್ಯಾಗ್ಡಾಲಾಳನ್ನೇ ಪ್ರಧಾನಪಾತ್ರ ಮಾಡಿಕೊಂಡು ಒಂದು ಚಿತ್ರ ರಚಿಸಬೇಕೆಂದು ಯೋಚಿಸುತ್ತಿದ್ದೇನೆ.”

“ವಸ್ತು ಸೊಗಸಾಗಿದೆ.”

“ಮೂಲವಸ್ತುವನ್ನು ನಾನು ಸ್ವಲ್ಪ ಬದಲಿಸಬೇಕೆಂದಿದ್ದೇನೆ.”

“ಹೇಗೆ?”

“ಟೆಸ್ಟಮೆಂಟ್‌ಗಳಲ್ಲಿ ನನುಗೆ ಮೇರಿ ಮಾಗ್ಡಾಲಾಳ ಪೂರ್ವ ಜೀವನ ಕಥೆ ಅಷ್ಟಾಗಿ ದೊರೆಯುವುದಿಲ್ಲ, ಅವಳು ವೇಶ್ಯಾವೃತ್ತಿಯನ್ನವಲಂಬಿಸಿರುತ್ತಾಳೆ. ಅದು ಬಯಲಿಗೆ ಬೀಳಲು ಜನ ಅವಳನ್ನು ಅಟ್ಟಿಸಿಕೊಂಡು ಬರುತ್ತಾರೆ. ಕಲ್ಲುಸೋಪಾನದ, ಮೇಲೆ ಕುಳಿಕಿದ್ದ ಸ್ವಾಮಿಯ ಬಳಿಗೆ ಓಡಿಬಂದವಳು ಆಶ್ರಯ ಬೇಡುತ್ತಾಳೆ. ಅವಳನ್ನು ಕಲ್ಲಿನಿಂದ ಹೊಡೆದು ಸಾಯಿಸಲು ಬಂದಿದ್ದ ಪುರಜನರನ್ನು ಕಂಡು ಸ್ವಾಮಿ ನಿಮ್ಮಲ್ಲಿ ಯಾರು ದೋಷಿಗಳಿಲ್ಲವೋ ಪಾಪಿಗಳಿಲ್ಲವೋ ಅವರು ಮೊದಲು ಮೇರಿಯ ಮೇಲೆ ಕಲ್ಲೊಗೆಯಿರಿ ಎಂದು ಹೇಳುತ್ತಾನೆ - ಅಲ್ಲವೇ?”

“ಹೌದು.”

“ರಸನಿರೂಪಣೆಗೆ ಇಷ್ಟೇ ವಸ್ತು ಸಾಲದು. ನನ್ನ ಕಥೆ ಹೀಗಿರುತ್ತದೆ. ಯೇಸು ಪ್ರಸಿದ್ಧಿಗೆ ಬಂದ ಕೂಡಲೆ, ಜೆರುಸಲಮ್ಮಿನ ಪ್ರಸಿದ್ಧ ವೇಶ್ಯೆ ಮೇರಿ ಮಾಗ್ಡಾಲಾ ಅವನನ್ನು ಮೋಹಿಸುತ್ತಾಳೆ. ತನ್ನ ಕಾಮದ ಬಲೆಯಲ್ಲಿ ಸ್ವಾಮಿಯನ್ನು ಕೆಡಹಲಿಚ್ಛಿಸಿ, ಒಂದು ರಾತ್ರಿ, ಸರ್ವಾಲಂಕೃತಳಾಗಿ ಅವನ ಬಡಕುಟೀರಕ್ಕೆ ಬಂದು,

’ನೀನು ದರಿದ್ರ - ನಾನು ಶ್ರೀಮಂತಳು. ದರಿದ್ರನಾದರೂ ನಿನ್ನನ್ನು ನಾನು ಮೋಹಿನಿದ್ದೇನೆ.’

’ಏಕೆ - ರೂಪರಾಣಿ’

’ನೀನು ಒಂದು ದಿನ ಈ ದೇಶದ ದೊರೆಯಾಗವೆಯೆಂದು ಜನ ಬೊಬ್ಬಿಡುತ್ತಿದ್ದಾರೆ.’

’ನಾನು ರಾಜನಾದರೆ ನೀನು ರಾಣಿಯಾಗಬೇಕೆಂದು ಇಚ್ಛಿಸುತ್ತಿರುವೆ.’

’ಹೌದು ನೀನೂ ನಾನೂ ಸೇರಿ ಈ ರೋಮಕರ ಸರ್ವಾಧಿಕಾರವನ್ನು ಕೊನೆಗಾಣಿಸಬೇಕು’

'ಹೇಗೆ ?'

'ನೀನು ಸೈನ್ಯ ಕಟ್ಟು. ನಾನು ಹಣ ಒದಗಿಸಿದ್ದೇನೆ.'

'ನಾನು ಹಣವಿಲ್ಲದೆ ಸೈನ್ಯಕಟ್ಟಿದ್ದೇನೆ.'

'ರೋಮಕರ ಉಕ್ಕಿನಾಯುಧಗಳ್ನು ನಿನ್ನ ಭಿಕ್ಷಕ ತಂಡದ ಊರೆಗೋಲುಗಳು ಎದುರಿಸಲಾರವು'

'ನನ್ನ ಯುದ್ಧ ಆಯುಧಗಳ ಘರ್ಷಣೆಯಲ್ಲ ಮೇರಿ ಮಾಗ್ಡಾಲಾ?'

'ಇನ್ನೇನು?'

'ಹೃದಯ ಘರ್ಷಣೆ - ಹೃದಯ ಪರಿವರ್ತನೆ.'

'ಈ ರೋಮಕ ರಾಕ್ಷಸರ ಹೃದಯ ನೀನು ಸಂವರ್ತಿಸಬಲ್ಲೆಯಾ?'

'ಪರಿವರ್ತಿಸಬಲ್ಲೆ ಎಂದು ನಂಬಿದ್ದೇನೆ.'

ಮೇರಿ ಮಾಗ್ಡಾಲಾ ನಕ್ಕು,

'ನೀನೊಬ್ಬ ಹುಚ್ಚ. ನೀನು ಹುಚ್ಚನಾಗಿರುವುದರಿಂದಲೇ ಏನೋ ನಾನು ನಿನ್ನನ್ನು ಪ್ರೀತಿಸುತ್ತಿರುವುದು, ಏಳು – ಹೋಗೋಣ'

'ಎಲ್ಲಿಗೆ ?'

'ನನ್ನ ಅರಮನೆಗೆ.'

'ನಿನ್ನ ಅರಮನೆ ನನ್ನ ಅರಮನೆಯಷ್ಟು ಚೆನ್ನಾಗಿದೆಯೇ?'

'ನೀನೇ ನೋಡುವೆಯಂತೆ ಏಳು - ನನ್ನ ಆರಮನೆಯ ಗೋಡೆಗಳನ್ನು ಅನರ್ಘ್ಯ ರತ್ನಗಳು ಅಲಂಕರಿಸಿವೆ - ನೆಲಕ್ಕೆ ಹಾಸಿರುವುದು ಪರ್ಶಿಯಾ ರತ್ನಗಂಬಳಿಗಳು - ನಾನು ಉಣ್ಣುವುದು ತಿನ್ನುವುದು ಚಿನ್ನದ ಹರಿವಾಣ ಬಟ್ಟಲುಗಳಲ್ಲಿ!'

ಯೇಸು ತನ್ನ ಮುಂದಿದ್ದ ಮನುಷ್ಯ ರುಂಡದ ಅಸ್ತಿಯನ್ನು ತೋರಿಸುತ್ತಾ,

'ಮೇರಿ - ಇದೇನು ಬಲ್ಲೆಯಾ ?'

'ತಲೆಬುರುಡೆ.'

'ಅಲ್ಲ- ಇವಳೊಬ್ಬ ದಿವ್ಯಸುಂದರಿ ಹೊನ್ನಿನ ಹೊನಲಿನಲ್ಲಿ ಮಿರುಗುತ್ತಿದ್ದಳು. ಈಗ ನೋಡು - ಅವಳ ಸೌಂದರ್ಯ, ಸಂಪತ್ತು ಎಲ್ಲಿಗೆ ಹೋಯಿತು.'

'ನೀನು ಶುದ್ಧ ಹುಚ್ಚ.'

'ಆ ವಿಷಯದಲ್ಲಿ ಜೆರೂಸಲಮ್ಮಿನಲ್ಲಿ ಭಿನ್ನಾಭಿಪ್ರಾಯವೇ ಇಲ್ಲ ಮೇರಿ.'

'ಈಗ ನೀನು ನನ್ನೊಂದಿಗೆ ಬರುವುದಿಲ್ಲ.'

'ಇಲ್ಲ.'

'ಮತ್ತೆ ಯಾವಾಗ ಬರುವೆ.'

'ಇನ್ನೊಮ್ಮೆ ನೀನು ನನ್ನನ್ನು ಕರೆಯುತ್ತೀ- ಆಗ ಬರುತ್ತೇನೆ.'

ಈ ಹಿನ್ನೆಲೆಯನ್ನಿಟ್ಟುಕೊಂಡು ನಾನು ಮೇರಿಯ ಕಥೆಯನ್ನು ಬೆಳಸಬೇಕೆಂದಿದ್ದೇನೆ.

"ಇದು ಅದ್ಭುತ ಕಲ್ಪನೆ ಆಲ್ಬರ್ಟೋ – ಟೆಸ್ಟ್‌ಮೆಂಟ್‌ಗಳಲ್ಲಿರುವ ಕ್ರೈಸ್ತನಿಗಿಂತಲೂ ನಿಮ್ಮ ಕ್ರೈಸ್ತ ದೊಡ್ಡ ವ್ಯಕ್ತಿಯಾಗಿದ್ದಾನೆ."

"ಟೆಸ್ಟ್‌ಮೆಂಟ್ ಮತ್ತು ನಾನು- ನಮ್ಮ ಕಲ್ಪನೆಗೂ ಮೀರಿದಷ್ಟು ಅವನು ದೊಡ್ಡವನು ಮೋ."

"ಆಲ್ಬರ್ಟೋ.........."

"ಏನು ಮೋ!"

"ಮೇರಿ ಪಾತ್ರ ನಾನೇ ಅಭಿನಯಿಸಬೇಕು."

"ಆ ವಿಷಯ ನಾನೀಗಲೇ ನಿರ್ಧರಿಸಲಾರೆ ಮೋ."

ಎಂದು ರೋಸಿನಿ ಆಕಳಿಸುತ್ತ ಮೇಲಕ್ಕೆದ್ದರು.

## ೨೬

ಕ್ಷಣಕ್ಷಣಕ್ಕೂ ಬದಲಾಯಿಸುತ್ತಿದ್ದ ರೋಸಿನಿಯವರ ಭಾವ, ಸ್ವಭಾವ, ಅವರ ಉದ್ವೇಗ, ಮನಃಕ್ಲೇಷ, ಆಗಾಗ್ಗೆ ಸ್ಫೋಟನವಾಗುತ್ತಿದ್ದ ಸಂತೋಷಗಳಿಗೆ ಹೊಂದಿಕೊಳ್ಳುವುದು ಮೋಹಿನಿಗೆ ದುಸ್ತರವಾಯಿತು.

ದಿನದಿನಕ್ಕೆ ಅವರಿಬ್ಬರ ಮನೋಭಾವಗಳ ಅಸಾಮಂಜಸ್ಯ, ಅಸಾಮರಸ್ಯ ಬಲಗೊಳ್ಳುತ್ತ ಬಂದಿತು. ಸಣ್ಣಪುಟ್ಟ ವಿಷಯಗಳಿಗೆ ನಿತ್ಯ ಇಬ್ಬರೂ ಜಗಳಕಾಯುತ್ತ ಬಂದರು.

ರೋಸಿನಿಯವರಿಗೂ ತನಗೂ ಘರ್ಷಣೆಯಾದ ದಿನ ಮೋಹಿನಿ ರೌಲೆಟ್ ಟೇಬಲ್ (Roulette Table) ಮುಂದೆ ಕುಳಿತು ಸಹಸ್ರಾರು ಡಾಲರ್‌ಗಳನ್ನು ಕಳೆದುಬಿಡುತ್ತಿದ್ದಳು.

ಒಂದು ದಿನ ಅವಳು ದ್ಯೂತಗೃಹಕ್ಕೆ ಹೊರಟಿದ್ದಾಳೆ.

ಪರ್ಸ್ ತೆಗೆದು ನೋಡಿಕೊಂಡಳು.

ಅವಳಲ್ಲಿ ಇದ್ದುದೆಲ್ಲಾ ಮುನ್ನೂರು ಡಾಲರ್‌ಗಳು.

ರೋಸಿನಿಯ ಬಳಿಗೆ ಬಂದು ಮೆಲ್ಲನೆ,

"ಆಲ್ಬರ್ಟೋರ್........" ಎಂದಳು.

ರೋಸಿನಿ ಕತ್ತೆತ್ತಿ ನೋಡಿ,

"ಏನು ಮೋ."

"ನನಗೆ ಸ್ವಲ್ಪ ಹಣ ಬೇಕು."

"ಏಕೆ ?"

"ಕ್ಲಬ್ಬಿಗೆ ಹೋಗುತ್ತಿದ್ದೇನೆ."

"ನಾನು ದ್ಯೂತಗೃಹ ಉದ್ಧಾರ ಮಾಡುವುದಕ್ಕೆ ಇಲ್ಲಿಗೆ ಬಂದಿಲ್ಲ ಮೋ."

"ನೀವು ಹಣ ಕೊಡುವುದಿಲ್ಲ....!"

"ಇಲ್ಲ."

"ಸರಿ"

ಎಂದು ಕೋಪಾವಿಷ್ಟಳಾಗಿ ದ್ಯೂತಗೃಹ ಸೇರಿದಳು.

ರೌಲೆಟ್ ಚಕ್ರ ಮೂರು ಬಾರಿ ಸುತ್ತುವುದರೊಳಗೆ ಅವಳ ಮುನ್ನೂರು ಡಾಲರ್‌ಗಳು ಅದೃಶ್ಯವಾದವು.

ಪೀಠ ಬಿಟ್ಟು ಏಳದೆ ಅವಳಿಗೆ ನಿರ್ವಾಹವಿಲ್ಲವಾಯಿತು.

ಹಿಂದೆ ನಿಂತು ಆಟ ನೋಡುತ್ತಿದ್ದವರೊಬ್ಬರು, ಮೆಲ್ಲನೆ ಅವಳ ಕೈಗೆ ಒಂದು ನೋಟಿನ ಕಂತೆ ಸರಿಸಿದರು.

ಮೋಹಿನಿ ಒಂದು ಸಲ ಹಿಂದಿರುಗಿ ನೋಡಿ,

"ನೀವು - ಇಲ್ಲಿ - ಗಿಲ್ಬರ್ಟ್" ಎಂದಳು.

ಗಿಲ್ಬರ್ಟ್ ಉತ್ತರಿಸಲಿಲ್ಲ.

ಗಿಲ್ಬರ್ಟ್ ಕೊಟ್ಟಿದ್ದ ನೋಟಿನ ಕಂತೆಯನ್ನೂ ರೌಲೆಟ್ ಚಕ್ರ ನುಂಗಲು, ಮೋಹಿನಿ ಪೀಠ ಬಿಟ್ಟೆದ್ದಳು.

ಇಬ್ಬರೂ ಹೊರಗೆ ಬರಲು ಗಿಲ್ಬರ್ಟ್,

"ನಾನು ನಿನ್ನೊಂದಿಗೆ ಮಾತನಾಡಬೇಕು ಮೋಹಿನಿ" ಎಂದ.

"ಎಲ್ಲಿಗೆ ಹೋಗೋಣ"

"ನನ್ನ ಹೊಟೇಲಿಗೆ"

"ಯಾವದದು ?"

"ಗ್ರೀನ್ ಡಾಲ್ಫಿನ್ (Green Dolphin)"

ಇಬ್ಬರೂ ಟ್ಯಾಕ್ಸಿಯಲ್ಲಿ ಕೂಡಲು, ಗಿಲ್ಬರ್ಟ್,

"ಕಳೆದ ವಾರ ನಾನು ನಿಮ್ಮ ಮನೆಗೆ ಹೋಗಿದ್ದೆ"

"ಏಕೆ?"

"ನಿನ್ನ ವಿಳಾಸ ತೆಗೆದುಕೊಳ್ಳುವುದಕ್ಕೆ."

"ವಿಳಾಸ ಸಿಕ್ಕಿತೇ ?"

"ಇಲ್ಲ, ನಿನ್ನ ಮೇಡ್ ಫಿಲ್ಲಿಸ್ ವಿಳಾಸ ಕೊಡುವುದಿಲ್ಲ ಎಂದಳು. ನೀನೂ ರೋಸಿನಿ ಫ್ರೆಂಚ್ ರಿವೇರಿಯಾಗೆ ಹೋಗಿರುವ ವಿಷಯ ನಾನು ಪತ್ರಿಕೆಗಳಲ್ಲಿ ಓದಿದ್ದೆ - ಮೊನಾಕೋ, ನೀಸ್, ಆಂಟಿಬೆಸ್, ಹೈರೆನ್, ವಿಲ್ಲಿಫ್ರಾಂಕೆ, ಸೆವೋನಾ, ಜಿನೋವಾ, ಸ್ಟೇಜಿಯಾ ನಗರಗಳಲ್ಲಿ ನಿನ್ನನ್ನು ಹುಡುಕಿದೆ."

"ನಾವು ಮಾಂಟಿ ಕಾರ್ಲೊ ಬಿಟ್ಟು ಎಲ್ಲಿಗೂ ಹೋಗಿಲ್ಲ. ಇಲ್ಲಿ ಮಿ. ಮತ್ತು ಮಿಸಸ್ ಅಲ್‌ಸ್ಮಿತ್ ಎಂದು ರಿಜಿಸ್ಟರ್ ಮಾಡಿಸಿದ್ದೇವೆ."

ಟ್ಯಾಕ್ಸಿ ಹೋಟೆಲ್ ತಲುಪುವವರೆಗೆ ಗಿಲ್ಬರ್ಟ್ ಮಾತನಾಡಲಿಲ್ಲ.

ಮೋಹಿನಿಯನ್ನು ತನ್ನ ರೂಮಿಗೆ ಕರೆದೊಯ್ದು ಗಿಲ್ಬರ್ಟ್ ಎರಡು ಗ್ಲಾಸುಗಳಿಗೆ ಡ್ರಿಂಕ್ ಬಗ್ಗಿಸಿ, ಒಂದನ್ನು ಅವಳ ಕೈಗಿತ್ತು,

"ನಮ್ಮ ನವಜೀವನಕ್ಕೆ ಈ ಟೋಸ್ಟ್ (Toast)" ಎಂದ.

ತನ್ನ ಗ್ಲಾಸ್ ಬರಿದು ಮಾಡಿ, ಟೀಪಾಯ್ ಮೇಲೆ ಖಾಲಿ ಗ್ಲಾಸ್ ಇಟ್ಟ ಮೋಹಿನಿ,

"ನವಜೀವನ - ಹಾಗಂದರೇನು ಗಿಲ್ಬರ್ಟ್ ?"

"ನಿನ್ನನ್ನು ಕಂಡಾರಭ್ಯ ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆಂಬುದು ನಿನಗೆ ಗೊತ್ತೇ ಮೋಹಿನಿ."

"ಗೊತ್ತಿದೆ."

"ನೀನು ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ."

"ರಾಜಕುಮಾರನ ಪಾತ್ರಕ್ಕೆ ನಿಮ್ಮನ್ನು ಆರಿಸಿದವಳು ನಾನೆಂಬುದು ನಿಮಗೆ ಗೊತ್ತೇ ಗಿಲ್ಬರ್ಟ್"

"ಹಾಗೇನು ?"

"ಹೌದು. ಅಭ್ಯರ್ಥಿಗಳ ಫೋಟೋಗಳನ್ನೆಲ್ಲಾ ಆಲ್ಬರ್ಟೋ ನನ್ನ ಕೈಗಿತ್ತು 'ಕಥಾನಾಯಕನನ್ನು ನೀನು ಆರಿಸು' ಎಂದರು. ನಾನು ನಿಮ್ಮನ್ನು ಆರಿಸಿದೆ."

"ಥ್ಯಾಂಕ್ಸ್ - ಮೋಹಿನಿ, ನಾನು ಕೆಲವು ವಿಷಯಗಳನ್ನು ಸ್ಪಷ್ಟವಾಗಿ ನಿನ್ನೊಂದಿಗೆ ಆಡಬೇಕಾಗಿದೆ."

"ಆಡಿ."

"ನೀನು ರೋಸಿನಿಯವರನ್ನು ಪ್ರೀತಿಸುತ್ತಿರುವೆಯಾ?"

"ಎಂಥ ವಿಲಕ್ಷಣ ಪ್ರಶ್ನೆ - ನನ್ನ ಸಮಸ್ತ ಅಭ್ಯುದಯಕ್ಕೂ ಅವರೇ ಕಾರಣವಲ್ಲವೇ ?"

"ಅದು ಕೃತಜ್ಞತೆ - ನಾನು ಕೇಳುತ್ತಿರುವುದು ಪ್ರೀತಿಯ ವಿಷಯ"

"ನಾವು ಆಲ್ಬರ್ಟೋನ ವಿಷಯ ಚರ್ಚಿಸಬಾರದು ಗಿಲ್ಬರ್ಟ್."

"ಚರ್ಚಿಸಬೇಕು - ಇದು ನನ್ನ - ನಿನ್ನ ಬದುಕು ಸಾವಿನ ಪ್ರಶ್ನೆ."

“ಹಾಗಂದರೆ..........”

“ರೋಸಿನಿ ಜತೆ ಯಾರೂ ಬಾಳಲು ಶಕ್ಯವಿಲ್ಲ ಎಂದು ನನಗೆ ಚೆನ್ನಾಗಿ ಗೊತ್ತು.”

“ಹೇಗೆ?”

“ರೋಸಿನಿಯವರ ಆರನೆಯ ಪತ್ನಿ ಹೆಲನ್, ಅವರಿಂದ ದಾಂಪತ್ಯ ವಿಚ್ಛೇದನ ಪಡೆದ ಮೇಲೆ ನನ್ನ ಬಂಗಾರದವಳಾಗಿದ್ದಳು.”

“ನಿಮಗೆ ಅವಳ ಪರಿಚಯ ಹೇಗಾಯಿತು?”

“ಪಾಲಿ ಆಡ್ಲರ್ ಮನೆಯಲ್ಲಿ.”

“…………..”

“ಹೆಲನ್ ನನಗೆ ರೋಸಿನಿಯವರ ವಿಷಯವನ್ನೆಲ್ಲಾ ಹೇಳಿದ್ದಾಳೆ. ನೀನು ಅವರಿಂದ ದೂರವಾಗಬೇಕು ಮೋಹಿನಿ.”

“ಏಕೆ?”

“ನಿನಗಾಗಿ – ನನಗಾಗಿ!”

“ನಿಮಗಾಗಿ !!”

“ಹೌದು - ನಿನ್ನ ಬಿಟ್ಟು ನಾನು ಜೀವಿಸಲಾರೆ.”

“ರೋಸಿನಿಯವರನ್ನು ಬಿಟ್ಟು ಹೋದರೆ ನಾನು ಉಪವಾಸವಿರಬೇಕಾಗುತ್ತದೆ. ’ರಾಜಹಂಸ’ ಚಿತ್ರಕ್ಕೆ ನಾನು ಸಂಪಾದಿಸಿದುದನ್ನು ರೌಲೆಟ್ ಟೇಬಲ್ಲಿಗೆ ಕುಕ್ಕಿಬಿಟ್ಟೆ.”

“ಆ ಬಗ್ಗೆ ನೀನು ವಿಚಾರ ಮಾಡಬೇಕಾಗಿಲ್ಲ. ನನಗೆ ಹಾಲಿವುಡ್ ನಿರ್ಮಾತೃಗಳಿಂದ ಬೇಕಾದಷ್ಟು ಆಮಂತ್ರಣಗಳು ಏರುತ್ತಿವೆ. ಎಂ.ಜಿ.ಎಂ. ಫಾಕ್ಸ್, ಯೂನಿವರ್ಸಲ್, ಕೊಲಂಬಿಯಾ, ಪ್ಯಾರಮೌಂಟ್ ಕಂಪೆನಿಯವರು ನನಗೆ ಕಾಂಟ್ರ್ಯಾಕ್ಟುಗಳನ್ನು ಕೊಡಲು ಸಿದ್ಧರಾಗಿದ್ದಾರೆ.”

“ಯಾವದನ್ನು ಒಪ್ಪಿಕೊಳ್ಳುವಿರಿ?”

“ಯಾವದನ್ನೂ ಒಪ್ಪಿಕೊಳ್ಳುವುದಿಲ್ಲ. ಇಂಗ್ಲೆಂಡಿನ ರ್‍ಯಾಂಕ್ ಪ್ರೊಡಕ್ಷನ್ಸ್ (Rank Productions) ಅವರಿಂದ ನನಗೆ ಆಮಂತ್ರಣ ಬಂದಿದೆ. ನೀನು ಬರಲೊಪ್ಪಿದರೆ ನಾವಿಬ್ಬರೂ ಇಂಗ್ಲೆಂಡಿಗೆ ಹೊರಟು ಹೋಗೋಣ.”

“ರೋಸಿನಿ ಮತ್ತೊಂದು ದೊಡ್ಡ ಚಿತ್ರ ಯೋಚಿಸುತ್ತಿದ್ದಾರೆ.”

“ಯಾವದು ಅದು.”

“ಮೇರಿ ಮಾಗ್ಡಾಲಾ.”

“ನಿನಗೆ ನಾಯಕಿ ಪಾತ್ರ ಕೊಡುತ್ತಾರೆಯೇ ?”

“ಗೊತ್ತಿಲ್ಲ.”

“ಕೊಡುವುದಿಲ್ಲ.”

“ಏಕೆ ?”

“ರೋಸಿನಿ ಸ್ವಭಾವವೇ ಹಾಗೆ! ಅವರು ಕೋಟುಗಳನ್ನು ಬದಲಿಸುವುದಕ್ಕಿಂತಲೂ ವೇಗವಾಗಿ ಹೆಣ್ಣುಗಳನ್ನು ಬದಲಿಸುತ್ತಾರೆ.”

“……………..”

ಮೊಂಡಯೂರಿ ನೆಲದ ಮೇಲೆ ಕುಳಿತ ಗಿಲ್ಬರ್ಟ್,

“ಮೋಹಿನಿ, ನಾನು ಬೇಡುತ್ತಿರುವ ಪ್ರಣಯ ಭಿಕ್ಷೆಯನ್ನು ನಿರಾಕರಿಸಬೇಡ.”

“ನಾನು ಯೋಚಿಸುವುದಕ್ಕೆ ಸ್ವಲ್ಪ ಅವಕಾಶ ಕೊಡಿ ಗಿಲ್ಬರ್ಟ್.”

“ಇಲ್ಲ ಪ್ರೇಯಸಿ - ಇಲ್ಲ ನನ್ನ ರಾಣಿ - ನೀನು ಯೋಚಿಸುವುದಕ್ಕೆ ನಾನು ಅವಕಾಶ ಕೊಡುವುದಿಲ್ಲ.”

ಎಂದು ಉತ್ಕಂಠಿತನಾಗಿ ನುಡಿದ.

ಗಿಲ್ಬರ್ಟನ ರೂಮು ಬಿಟ್ಟು ತನ್ನ ಹೋಟಲಿಗೆ ಮೋಹಿನಿ ಹೊರಡುವ ವೇಳೆಗೆ ರಾತ್ರಿ ಎರಡು ಗಂಟೆಯಾಯಿತು.

ಅವಳನ್ನೊಂದು ಟ್ಯಾಕ್ಸಿಯಲ್ಲಿ ಕೂಡಿಸಿದ ಗಿಲ್ಬರ್ಟ್,

“ನಾಳೆ………”

“ಬರುತ್ತೇನೆ.”

“ಗುಡ್ ನೈಟ್ ಮೋ.”

“ಗುಡ್‌ನೈಟ್ ಗಿಲ್ಲೀ........” ಎಂದಳು.

## ೨೭

ಮಾಂಟಿಕಾರ್ಲೋದ ದುರಿತ ಗತಿಯ ಜೀವನ ಅದರೊಂದಿಗೆ ಹಾದು ಹೊಕ್ಕಾಗಿ ಹೊಂದಿಕೊಂಡಿದ್ದ ಮೋಹಿನಿಯ ಮನಸ್ಸಿನ ಮೇಲಾಗುತ್ತಿದ್ದ ಪರಿಣಾಮ ಅನುಲಕ್ಷಿಸಿದ ರೋಸಿನಿ, ಊರಿಗೆ ಹಿಂದಿರುಗಲು ನಿಶ್ಚಯಿಸಿದರು."

ಅವರು ಊರಿಗೆ ಹಿಂದಿರುಗಲು, ಸುಸ್ವಾಗತ ಬಯಸಿದ ಫಿಲ್ಲಿಸ್,

"ವೆಕೇಷನ್ ಹೇಗಾಯಿತು ಮಿಸ್ ಮೋಹಿನಿ."

ಎಂದು ಕೇಳಿದಳು.

"ಚೆನ್ನಾಗಿ ಆಯಿತು ಫಿಲ್ಲಿಸ್,"

"ನಿಮ್ಮ ಆರೋಗ್ಯ ಸುಧಾರಿಸಿದೆ. - ಬಾಸ್ ಸಂತೋಷವಾಗಿದ್ದರೇ?"

"ಅವರ ಸ್ವಭಾವ ನಿನಗೆ ಗೊತ್ತೇ ಇದೆಯಲ್ಲ ಫಿಲ್ಲಿಸ್ - ಎರಡು ದಿನ ನಗುತಿದ್ದರೆ, ನಾಲ್ಕು ದಿನ ಮುಖಗಂಟುಹಾಕಿಕೊಂಡಿರುತ್ತಾರೆ."

"ಪ್ರತಿಭೆ ವರವಾಗುವಂತೆ  ಶಾಪವಾಗುವುದೂ ಉಂಟು ಮಿಸ್ ಮೋಹಿನಿ"

"ಹೌದು ಫಿಲ್ಲಿಸ್ - ಆ ಮಾತು ನನ್ನ ಅನುಭವಕ್ಕೂ ಬಂದಿದೆ."

ಎಂದು ಮೋಹಿನಿ ಅರ್ಥಗರ್ಭಿತವಾಗಿ ಉತ್ತರಿಸಿದಳು.

ರೋಸಿನಿ ತಮ್ಮ ಚಿತ್ರ ಸಿದ್ಧತೆಗೆ ಮನಸ್ಸು ತೆತ್ತರು.

ತಾಂತ್ರಿಕರೊಂದಿಗೆ, ಗೀತಾರಚಕರೊಂದಿಗೆ, ಸಂಭಾಷಣಲೇಖಕರೊಂದಿಗೆ ಅವರು ಹಗಲಿರುಳು ವಿಚಾರ ವಿನಿಮಯ ಮಾಡತೊಡಗಿದರು.

ರೋಸಿನಿಯವರ ಅವಿಶ್ರಾಂತ ಪರಿಶ್ರಮದ ಪೂರ್ಣ ಪ್ರಯೋಜನ ಪಡೆದುಕೊಂಡು ಮೋಹಿನಿ, ಗಿಲ್ಬರ್ಟ್‌ನನ್ನು ನಿತ್ಯ ನೋಡಲಾರಂಭಿಸಿದಳು.

ಹಾಲಿವುಡ್‌ನ ಪೀತಪತ್ರಿಕೆಗಳು ಅವರ ಚಲನವಲನಗಳನ್ನು ಕುತೂಹಲದಿಂದೀಕ್ಷಿಸತೊಡಗಿದವು.

ಒಂದು ದಿನ ಗಿಲ್ಬರ್ಟನನ್ನು ನೋಡಿಕೊಂಡು ಮೋಹಿನಿ ಮನೆಗೆ ಬಂದು, ಹಜಾರದಲ್ಲಿ ಒಬ್ಬ ಹೆಂಗಸು ಕುಳಿತ್ತಿದ್ದುದನ್ನು ಕಂಡಳು.

ಒಳಗೆ ನೇರವಾಗಿ ಹೋದ ಮೋಹಿನಿ, ಪಾಕಶಾಲೆ ಪ್ರವೇಶಿಸಿ,

“ಅವಳು ಯಾರು ಫಿಲ್ಲಿಸ್ ಎಂದು ಕೇಳಿದಳು.”

“ಹೆಲನ್ !”

“ಹೆಲನ್ !! - ಈ ಕುಲಟೆಗೆ ನಮ್ಮ ಮನೆಯಲ್ಲಿ ಏನು ಕೆಲಸ?”

“ನನಗೆ ಗೊತ್ತಿಲ್ಲ ಮಿಸ್ ಮೋಹಿನಿ. ರೋಸಿನಿಯವರನ್ನು ನೋಡಬೇಕೆಂದಳು - ಅವರು ಮನೆಯಲ್ಲಿಲ್ಲ ಎಂದು ಹೇಳಿದೆ - ಅವರು ಬರುವವರೆಗೆ ಕಾಯುತ್ತೇನೆಂದು ಕುಳಿತಿದ್ದಾಳೆ.”

“ನೀನು ಒದ್ದು ಹೊರಗೆ ಹಾಕಲಿಲ್ಲವೇ?”

“ಪ್ರಯತ್ನಿಸಿದೆ - ಅವಳು ಜಪ್ಪಯ್ಯ ಎನ್ನಲಿಲ್ಲ.”

ಕೋಪಾವಿಷ್ಟಳಾಗಿ ಹೊರಗೆ ಬಂದ ಮೋಹಿನಿ,

“ಮಿ. ರೋಸಿನಿ ಬರುವುದು ಬಹಳ ತಡವಾಗುತ್ತದೆ ಮಿಸ್. ಹೆಲನ್ - ನೀವು ಕಾಯಬೇಕಾದ್ದಿಲ್ಲ”

ಹೆಲನ್ ತನ್ನ ಕರಚೀಲದಿಂದ ಪೌಡರ್ ಬಾಕ್ಸ್ ತೆಗೆದುಕೊಂಡು, ಮುಖಕ್ಕೆ ಪೌಡರ್ ಲೇಪಿಸಿಕೊಳ್ಳುತ್ತಾ,

“ನನ್ನ ಹೆಸರು ನಿಮಗೆ ಗೊತ್ತಾಗಿದೆ !”

“ಗೊತ್ತಾಗಿದೆ.”

“ಆಲ್ಬರ್ಟೋ ಹೇಳಿರಬೇಕು.”

“ಇಲ್ಲ. ಫಿಲ್ಲಿಸ್ ಹೇಳಿದಳು ”

ಮೋಹಿನಿಯನ್ನು ಆಪಾದ ಮಸ್ತಕ ನೋಡಿದ ಹೆಲನ್,

“ನಿಮ್ಮನ್ನು ಚಿತ್ರದಲ್ಲಿ ನೋಡಿದ್ದೆ - ಇಂದು ಎದುರಿಗೆ ಕಂಡ ಹಾಗಾಯಿತು. ಆಲ್ಬರ್ಟೋ ಅಭಿರುಚಿ ಶ್ಲಾಘನೀಯವಾದದ್ದು.”

“ನಿಮ್ಮ ಹೊಗಳಿಕೆ ಕೇಳುವುದಕ್ಕೆ ನಾನು ಸಿದ್ಧವಾಗಿಲ್ಲ.”

“ನಿಮ್ಮನ್ನು ಹೊಗಳುವುದಕ್ಕೆ ನಾನು ಇಲ್ಲಿಗೆ ಬಂದಿಲ್ಲ.”

“ಇನ್ನೇಕೆ ಬಂದಿರಿ?”

“ಆಲ್ಬರ್ಟೋನ ಕಾಣುವುದಕ್ಕೆ.”

“ಅವರಲ್ಲಿ ನಿಮಗೇನು ಕೆಲಸ?”

“ಆ ಪ್ರಶ್ನೆ ನನ್ನ ಕೇಳಬೇಡಿ - ಆಲ್ಬರ್ಟೋನ ಕೇಳಿ.”

“ಆಲ್ಬರ್ಟೋ ಅವರಿಗೆ ನಿಮ್ಮಲ್ಲಿ ಕೆಲಸವಿದೆಯೇ ?”

“ಇಲ್ಲದಿದ್ದರೆ ಅವರು ಪಾಲಿ ಆಡ್ಲರ್ ಮನೆಗೆ ನನ್ನನ್ನೇಕೆ ಹುಡುಕಿಕೊಂಡು ಬರುತ್ತಿದ್ದರು.”

“ಪಾಲಿ ಆಡ್ಲರ್. ಆ ಕುಂಟಲಗಿತ್ತಿ.”

“ಆ ಕುಂಟಲಗಿತ್ತಿಯ ಮನೆಯಲ್ಲೇ ಅವರು ನನ್ನನ್ನು ಕಂಡಿದ್ದರು.”

“ಕಂಡಿದ್ದರು ! ಏಕೆ?”

“ಆಲ್ಬರ್ಟೋರ್ 'ಮೇರಿ ಮಾಗ್ಡಾಲಾ' ಮೇಲೆ ಒಂದು ಚಿತ್ರ ತೆಗೆಯಬೇಕೆಂದಿರುವ ವಿಷಯ ನಿಮಗೆ ಗೊತ್ತಿದೆಯಷ್ಟೇ?”

“ಗೊತ್ತಿದೆ”

“ಸ್ಕ್ರೀನ್ ಟೆಸ್ಟಗೆ (Screen test) ನನ್ನ ಬರಹೇಳಿದರು.”

ತಿರಸ್ಕಾರದಿಂದ ನಕ್ಕ ಮೋಹಿನಿ,

“ನೀವು ಮಾಗ್ಡಾಲಾ ಪಾತ್ರಕ್ಕೆ..........!”

“ಮಾಗ್ಡಾಲಾ ಕೂಡ ನನ್ನ ಹಾಗೇ ಇದ್ದ ಒಬ್ಬ ಹೆಂಗಸು - ಸತ್ಯನಿಷ್ಠಳಾದ ವೇಶ್ಯೆ - ಅವಳೆಂದೂ ಗೃಹಿಣಿಯಂತೆ ಸೋಗು ಹಾಕಲಿಲ್ಲ- ನನ್ನ ಹಾಗೆ....... !”

ಕೆಣಕಿದ ಫಣಿಯಂತೆ ಮೇಲಕ್ಕೆದ್ದ ಮೋಹಿನಿ,

“ಮೊದಲು ಇಲ್ಲಿಂದ ಹೊರಟುಹೋಗಿ”

ಎಂದು ಅರಚಿದಳು.

ಸಾವಕಾಶವಾಗಿ ಮೇಲಕ್ಕೆದ್ದ ಹೆಲನ್, ಬಾಗಿಲ ಬಳಿಗೆ ಹೋಗಿ,

“ನಿಮ್ಮ ಕಾಲ ಮುಗಿದು ಹೋಯಿತು ಮೈಡಿಯರ್ ಪ್ಯಾಕ್ ಅಪ್ (Pack up)”

ಎಂದು ಹೇಳಿ ಬಾಗಿಲನ್ನು ಎಳೆದುಕೊಂಡು ಹೊರಟು ಹೋದಳು.

ತನ್ನ ಭವಿಷ್ಯವನ್ನೇ ಕುರಿತು ಚಿಂತಿಸುತ್ತಾ ಮೋಹಿನಿ ಹಜಾರದಲ್ಲಿ ಕುಳಿತಳು.

ಅವಳು ಒಳಗೆ ಬರದಿರಲು, ಹೊರಗೆ ಬಂದ ಫಿಲ್ಲಿಸ್.

“ಇಲ್ಲೇಕೆ ಕುಳಿತಿರಿ ಮಿಸ್. ಮೋಹಿನಿ. ಏಳಿ - ಊಟ ಮಾಡಿ.”

“ನನಗೆ ಊಟ ಬೇಕಿಲ್ಲ ಮಿಸ್. ಫಿಲ್ಲಿಸ್. ನೀನು ಮಾಡು.”

“ಹೆಲನ್ ಬಂದಿದ್ದ ವಿಷಯ ನೀವು ಬಾಸ್ ಜತೆ ಪ್ರಸ್ತಾಪಿಸಬೇಡಿ ಮೋಹಿನಿ.”

“ಏಕೆ ಪ್ರಸ್ತಾಪಿಸಬಾರದು? ನನ್ನ ಮನೆಗೆ ಈ ಕುಲಟೆಯನ್ನು ಬರಮಾಡಲು ಆಲ್ಬರ್ಟೋಗೆ ಎಷ್ಟು ಧೈರ್ಯ?”

“ಬಾಸ್ ಜತೆ ಜಗಳಕಾಯಬೇಕೆಂದಿರುವಿರಾ?”

“ಇವತ್ತು ಯಾವುದಾದರೊಂದು ಇತ್ಯರ್ಥವಾಗಬೇಕು ಫಿಲ್ಲಿಸ್ - ನಾನು ಅಥವಾ ಹೆಲನ್.”

“ನನ್ನ ಮಾತು ಕೇಳಿ, ಹೆಲನ್ನಿಗೂ ಬಾಸಿಗೂ ಯಾವ ಸಂಬಂಧವೂ ಇಲ್ಲ.”

“ಸಂಬಂಧವಿಲ್ಲದಿದ್ದರೆ ಇವರು ಹೆಲನ್ನಳನ್ನು ಹುಡುಕಿಕೊಂಡು ಪಾಲಿ ಆಡ್ಲರ್ ಮನೆಗೆ ಹೋಗುತ್ತಿದ್ದರೇ ?”

“ನಾನು ಹೇಳುವುದು ಹೇಳಿದ್ದೇನೆ - ಇದರ ಮೇಲೆ ನಿಮ್ಮ ಇಷ್ಟ.”

ಎಂದು ಫಿಲ್ಲಿಸ್ ಒಳಗೆ ಹೋದಳು.

ರೋಸಿನಿ ಮನೆಗೆ ಬಂದಾಗ ಹನ್ನೊಂದು ಗಂಟೆ

ಕಂಠಪೂರ್ತಿ ಕುಡಿದುಬಂದಿದ್ದ ರೋಸಿನಿ, ತಮ್ಮ ಗ್ರೇಟ್‌ಕೋಟ್ (great coat) ತೆಗೆದಿಟ್ಟು ಒಳಗೆ ಪ್ರವೇಶಿಸಿದರು,

ಅವರನ್ನು ಕಂಡಕೂಡಲೆ ಮೋಹಿನಿ, ಕನಲಿ,

“ಎಲ್ಲಿಗೆ ಹೋಗಿದ್ದಿರಿ ಇಷ್ಟು ಹೊತ್ತು ?”

ಎಂದು ಕೇಳಿದಳು.

“ಆ ಪ್ರಶ್ನೆ ನಾನು ನಿನ್ನನ್ನು ಕೇಳುವುದಿಲ್ಲ- ನೀನು ನನ್ನನ್ನು ಕೇಳಬಾರದು.”

“ನೀವು ಎಲ್ಲಿಗೆ ಹೋಗಿದ್ದರೆಂಬುದು ನನಗೆ ಗೊತ್ತು,”

“ಗೊತ್ತಿದ್ದ ಮೇಲೆ ಕೇಳುವುದೇಕೆ ?”

“ನೀವು ಏನು ಹೇಳುತ್ತೀರಿ - ನೋಡೋಣವೆಂದು!”

“ನಾನು ಎಲ್ಲಿಗೆ ಹೋಗಿದ್ದೆ – ಹೇಳು.”

“ಆ ಮನೆಮುರುಕಿ ಪಾಲಿ ಆಡ್ಲರ್ ಮನೆಗೆ.”

“ಪಾಲಿ ಆಡ್ಲರ್ - ಆ ಹೆಸರು ನಿನಗೆ ಹೇಗೆ ಗೊತ್ತು.”

“ನಿಮ್ಮ ಪ್ರೇಯಸಿ ಹೆಲನ್ನಳಿಂದ.”

“ಹೆಲನ್ ಬಂದಿದ್ದಳೇ?”

“ಬಂದಿದ್ದಳು.”

“ಏನು ಹೇಳಿದಳು.”

“ಏನೂ ಹೇಳಲಿಲ್ಲ. ನಾನು ಒದ್ದು ಅವಳನ್ನು ಹೊರಗೆ ಹಾಕಿದೆ.”

“ಯು ಫೂಲ್ (you fool)”

“ಹೆಲನ್‌ಗೆ ಮಾಗ್ಡಾಲ ಪಾತ್ರ ಕೊಡಲು ವಾಗ್ದಾನಮಾಡಿರುವರಂತೆ. ನಿಜವೇ?”

“ಆ ಬಗ್ಗೆ ನಾನಿನ್ನೂ ಯಾವ ನಿರ್ಧಾರಕ್ಕೂ ಬಂದಿಲ್ಲ.”

“ಸುಳ್ಳು - ನೀವು ಹೆಲನ್ನಿಗೆ ವಾಗ್ದಾನ ಮಾಡಿದ್ದೀರಿ”

“ಷಟ್ ಅಪ್ (Shut up)”

“ನನಗೆ ಮಾಗ್ಡಾಲ ಪಾತ್ರ ಕೊಡಬಾರದೆಂದು ನಿಮ್ಮ ಮನಸ್ಸಿನಲ್ಲಿದ್ದರೆ ಹೆಲನ್‌ಗಿಂತ ಉತ್ತಮರು ಹಾಲಿವಡ್‌ನಲ್ಲಿ ನಿಮಗೆ ಸಿಕ್ಕುತ್ತಿರಲಿಲ್ಲವೆ. ಹುಡುಕಿ ಹುಡುಕಿ ಆ ಗಟಾರದ ಗಯ್ಯಾಳಿಯನ್ನೇ ಆರಿಸಬೇಕಾಗಿತ್ತೆ ?”

“ಮೋ, ದಯೆಯಿಟ್ಟು ಈ ಅವಿವೇಕದ ಮಾತುಗಳನ್ನು ನಿಲ್ಲಿಸು. ನನ್ನ ತಾಳ್ಮೆಗೂ ಒಂದು ಮಿತಿಯಿದೆ. ನನಗೆ ಪ್ರೇಮ ಎಷ್ಟು ದೊಡ್ಡದೋ, ನನ್ನ ಕೆಲಸವೂ ಅಷ್ಟೇ ದೊಡ್ಡದು. ನನ್ನ ಕಾರ್ಯರಂಗ ಪ್ರವೇಶಿಸುವ ಅಧಿಕಾರ ನಿನಗಿಲ್ಲ, ಮಾಗ್ಡಾಲ ಪಾತ್ರಕ್ಕೆ ನನಗೆ ಬೇಕಾದವರನ್ನು ನಾನು ಚುನಾಯಿಸುತ್ತೇನಲ್ಲದೆ, ನಿನಗೆ ಬೇಕಾದವರನ್ನು ನಾನು ಚುನಾಯಿಸುವುದಿಲ್ಲ”

“ನಾಯಿಗೆ ತಿಪ್ಪೆಯ ಎಂಜಲು ರುಚಿಸುವಂತೆ, ಮೃಷ್ಟಾನ್ನ ರುಚಿಸುವುದೇ.”

“ಕುಲಟೆ”

ಎಂದು ಸಿಂಹನಾದ ಮಾಡಿದ ರೋಸಿನಿ, ಮೋಹಿನಿಯನ್ನು ಹಿಡಿದು ಬಲವಾಗಿ ನಾಲ್ಕು ಬಿಗಿದು, ತಮ್ಮ ಕೋಣೆಗೆ ಹೋಗಿಬಿಟ್ಟರು.

# ೩೮

ಮೂರು ದಿನಗಳು ಕಳೆದವು.

ಮೋಹಿನಿ, ರೋಸಿನಿಯವರಿಗೆ ಮುಖ ತೋರಿಸುತ್ತಿರಲಿಲ್ಲ.

ರೋಸಿನಿ ಅವಳನ್ನು ಮಾತನಾಡಿಸುವ ಪ್ರಯತ್ನ ಮಾಡಲಿಲ್ಲ.

ನಾಲ್ಕನೆಯ ದಿನ ಬೆಳಿಗ್ಗೆ ರೋಸಿನಿ ಬೇಗ ಮನೆಬಿಟ್ಟು ಹೋದರು.

ಬೆಳಿಗ್ಗೆ ಒಂಭತ್ತಾದರೂ ಮೋಹಿನಿ, ತನ್ನ ರೂಮ್‌ಬಿಟ್ಟು ಬರದಿರಲು, ಕಾಫಿ ಟ್ರೇ ತೆಗೆದುಕೊಂಡು ಫಿಲ್ಲಿಸ್ ಅವಳ ರೂಮಿಗೆ ಹೋದಳು.

ಅಲ್ಲಿ ಕಂಡು ಬಂದ ದೃಶ್ಯ ಫಿಲ್ಲಿಸ್‌ಳನ್ನು ಅವಾಕ್ಕಾಗಿಸಿತು. ಟ್ರೇ ಅವಳ ಕೈಯಿಂದ ಕೆಳಗೆ ಬಿತ್ತು.

ಮೋಹಿನಿ ಬಟ್ಟೆಬರೆಗಳು, ಸೂಟ್‌ಕೇಸ್ ಅದೃಶ್ಯವಾಗಿದ್ದವು - ಮೋಹಿನಿಯೂ ಅದೃಶ್ಯಳಾಗಿದ್ದಳು.

ಫಿಲ್ಲಿಸ್ ಕಕ್ಕಾಬಿಕ್ಕಿಯಾಗಿ, ಕ್ಲಬ್ಬಿಗೆ, ಸ್ಟುಡಿಯೋಕ್ಕೆ ರೋಸಿನಿಯವರಿಗಾಗಿ ಫೋನ್ ಮಾಡಿದಳು. ಎಲ್ಲಿಯೂ ರೋಸಿನಿ ಸಿಕ್ಕಲಿಲ್ಲ.

ರೋಸಿನಿಯವರ ದಾರಿಯನ್ನೇ ಕಾಯುತ್ತ ಕುಳಿತ ಫಿಲ್ಲಿಸ್ ರಾತ್ರಿ ಒಂಭತ್ತಕ್ಕೆ ಅವರು ಬಂದಕೂಡಲೆ, ಬಲ ವಿಷಯಗಳನ್ನೂ ವಿವರಿಸಿದಳು.

ರೋಸಿನಿ ಗಾಬರಿಗೊಂಡು, ಮೋಹಿನಿಯ ರೂಮ್ ನೋಡಿಬಂದರು.

ಫಿಲ್ಲಿಸ್ ಹೇಳಿದ್ದು ಅಕ್ಷರಶಃ ಸತ್ಯವಾಗಿತ್ತು.

“ಎಲ್ಲಿಗೆ ಹೋದಳು ಫಿಲ್ಲಿಸ್.”

“ನನಗೆ ಗೊತ್ತಿಲ್ಲ- ನಿಮ್ಮನ್ನು ಫೋನಿನಲ್ಲಿ ಕಾಂಟ್ಯಾಕ್ಟ್ (Contact) ಮಾಡಲೆತ್ನಿಸಿದೆ - ನೀವು ಸಿಕ್ಕಲಿಲ್ಲ”

“ಮೋಹಿನಿ ಹೀಗೆ ಹೊರಟು ಹೋದರೆ ನನ್ನ ಗೌರವ ಮಣ್ಣುಗೂಡಿ ಹೋಗಿ ಬಿಡುತ್ತದೆ ಫಿಲ್ಲಿಸ್”

ಎಂದು ಟೆಲಿಫೋನ್ ಡೈರೆಕ್ಟರಿ ಕೈಗೆತ್ತಿಕೊಂಡು, ಒಂದು ಪ್ರೈವೇಟ್ ಡಿಟೆಕ್ಟಿವ್ ಏಜನ್ಸಿಗೆ (Private Detective Agency) ಡಯಲ್ ಮಾಡಿದರು.

’ಯಾರು?’

’ರೋಸಿನಿ.’

’ರಾಯಲ್ ಸ್ವಾನ್ (Royal Swan) ನಿರ್ಮಾತೃ ರೋಸಿನಿ ಅವರೇ.’

’ಹೌದು - ಯಾರು ಮಾತಾಡುತ್ತಿರುವವರು’

’ಆರ್ಚಿ ಮೋಯೋ - ಡಿಟೆಕ್ಟಿವ್ ಏಜನ್ಸಿಯ ಮ್ಯಾನೇಜರ್.’

’ಮಿ. ಮೋಯೋ ನಿಮ್ಮಿಂದ ನನಗೊಂದು ಉಪಕಾರವಾಗಬೇಕು.’

’ಹೇಳಿ ಮಿ. ರೋಸಿನಿ. ನಿಮ್ಮ ಸೇವೆಗೆ ನಾವು ಸಿದ್ಧರಾಗಿದ್ದೇವೆ.’

’ಕೂಡಲೆ ನಿಮ್ಮ ದಕ್ಷ ಪ್ರೈವೇಟ್ ಡಿಟೆಕ್ಟಿವ್ ಒಬ್ಬನನ್ನು ಕಳಿಸಲು ಶಕ್ಯವೇ - ವಿಷಯ ಅತ್ಯಂತ ಗೋಪ್ಯವಾಗಿರಬೇಕು - ಮನುಷ್ಯ ಪ್ರಾಮಾಣಿಕನಾಗಿರಬೇಕು.’

’ಬೆರ್ಟ್ ಥಾಮಸ್ಸರನ್ನೇ ಕಳಿಸಿಕೊಡುತ್ತೇನೆ -’

’ಬೇಗ ಕಳಿಸಿ.’

’ಎಸ್ ಸರ್ ’

ಕಾಲುಗಂಟೆಯಲ್ಲಿ ಯಾರೋ ಹೊರಗೆ ಕರೆಗಂಟೆ (Calling bell) ಬಾರಿಸಲು, ರೋಸಿನಿಯವರೇ ಎದ್ದು ಹೋಗಿ ಬಾಗಿಲು ತೆಗೆದು,

“ಮಿ. ಬೆರ್ಟ್ ಥಾಮಸ್” ಎಂದರು.

“ಹೌದು ಸರ್.”

“ಒಳಗೆ ಬನ್ನಿ”

ಎಂದು ಥಾಮಸ್‌ನನ್ನು ತಮ್ಮ ವ್ಯಾಸಂಗಕೋಣೆಗೆ ಕರೆದೊಯ್ದು ಕುಳ್ಳಿರಿಸಿಕೊಂಡು ನಡೆದಿದ್ದ ವಿದ್ಯಮಾನಗಳನ್ನೆಲ್ಲಾ ವಿವರಿಸಿ,

“ಮಿಸ್. ಮೋಹಿನಿ ಎಲ್ಲಿದ್ದರೂ ಪತ್ತೆ ಹಚ್ಚಿ ನೀವು ತಿಳಿಸಬೇಕು.” ಎಂದರು.

“ಮಿಸ್. ಮೋಹಿನಿಯ ಗೆಳೆಯರು ಯಾರು ?”

“ನನಗೆ ಗೊತ್ತಿಲ್ಲ.”

“ನಿಮಗೆ ಯಾರ ಮೇಲಾದರೂ ಅನುಮಾನವಿದೆಯೊ ?”

“ಇಲ್ಲ.”

"ಸಮಸ್ಯೆ ಕ್ಲಿಷ್ಟವಾಗಿದೆ ಮಿ. ರೋಸಿನಿ - ಮಿಸ್. ಮೋಹಿನಿ ಸ್ಟೇಟ್ಸ್‌ನಲ್ಲೇ ಇದ್ದರೆ ಅವರ ಪತ್ತೆ ಹಚ್ಚುವುದು ಕಷ್ಟವಿಲ್ಲ. ನೀವು ನನಗೆ ಮೂರು ದಿವಸ ಅವಕಾಶ ಕೊಡಿ."

"ಹಾಗೆ ಆಗಲಿ"

ಎಂದು ರೋಸಿನಿ ಒಪ್ಪಿಕೊಂಡರು.

ನಾಲ್ಕನೆಯ ದಿನ ಬಂದ ಬೆರ್ಟ್ ಥಾಮಸ್,

"ಮಿಸ್. ಮೋಹಿನಿ ಸ್ಟೇಟ್ಸ್‌ನಲ್ಲಿಲ್ಲ ರೋಸಿನಿಯವರೇ – ನಾನು ಇಂಗ್ಲೆಂಡ್, ಫ್ರಾನ್ಸ್ ಇಟಲಿಗಳಿಗೆ ಫೋನ್ ಮಾಡಿದ್ದೇನೆ. ಅಲ್ಲಿಂದ ಏನಾದರೂ ಸುದ್ದಿ ಬಂದರೆ ತಿಳಿಸುತ್ತೇನೆ" ಎಂದರು

ರೋಸಿನಿ ಹತಾಶರಾಗಿ ಕುಳಿತುಬಿಟ್ಟರು.

ಅವರನ್ನು ಸಂತೈಸುವುದು ಫಿಲ್ಲಿಸ್‌ಗೆ ದೊಡ್ಡ ಸಮಸ್ಯೆಯಾಯಿತು.

ರೋಸಿನಿ ಅವರ ದುಃಖ ನೋಡಲಾಗದೆ ಫಿಲ್ಲಿಸ್ ಒಂದು ದಿನ,

"ಬಾಸ್, ನೀವು ಹೀಗೆ ಕೊರಗುವುದರಲ್ಲಿ ಅರ್ಥವೇನು? ಮಿಸ್. ಮೋಹಿನಿಯವರಂಥ ಹೆಂಗಸರು ನಿಮಗೆ ಸಾವಿರ ಜನ ಸಿಕ್ಕುತ್ತಾರೆ."

"ಹಾಗಲ್ಲ ಫಿಲ್ಲಿಸ್- ಮೋಹಿನಿಯನ್ನು ಮನಃಪೂರ್ವಕವಾಗಿ ಪ್ರೀತಿಸಿದೆ. ಮಾಗ್ಡಾಲ ಪಾತ್ರವನ್ನು ಅವಳಿಗೇ ಕೊಡಲು ನಿರ್ಧರಿಸಿದ್ದೆ - ಅವಳು ಹೊರಟು ಹೋದ ದಿನವೇ ಈ ವಿಷಯ ಅವಳಿಗೆ ತಿಳಿಸಬೇಕೆಂದಿದ್ದೆ."

"ನಿರ್ಭಾಗ್ಯೆ ! - ಹೋಗಲಿ ಅವರನ್ನು ಮರೆತುಬಿಡಿ – ಹೆಲನ್ನಳನ್ನು ಬರಮಾಡಲೇ?"

"ಬೇಡ - ಬೇಡ ಫಿಲ್ಲಿಸ್ - ನನಗಿನ್ನು ಯಾರೂ ಬೇಡ"

ಎಂದು ಹೇಳುತ್ತಿದ್ದಂತೆ ಅವರ ಕಣ್ಣುಗಳಿಂದ ಹನಿಗಳು ತೊಟ್ಟಿಕ್ಕಿದವು.

ಒಂದು ವಾರ ಕಳೆದು ಹೋಯಿತು.

ರೋಸಿನಿ ನೂರಾರು ಸಲ ಡಿಟೆಕ್ಟಿವ್ ಏಜನ್ಸಿಗೆ ಫೋನ್ ಮಾಡಿದರು. ಅಲ್ಲಿಂದ ಒಂದೇ ಉತ್ತರ,

"ಬೆರ್ಟ್ ಥಾಮಸ್ ಅದೇ ಕೆಲಸದಲ್ಲಿ ಉದ್ಯುಕ್ತರಾಗಿದ್ದಾರೆ - ಇನ್ನೂ ಖಚಿತವಾದ ಸುದ್ದಿ ತಿಳಿದುಬಂದಿಲ್ಲ."

ಹತ್ತನೆಯ ದಿನ ರೋಸಿನಿಯನ್ನು ಕಾಣಲು ಬೆರ್ಟ್ ಥಾಮಸ್ ಬಂದ.

"ಏನು ಸಮಾಚಾರ ಮಿ. ಥಾಮಸ್."

“ನನ್ನ ಪ್ರಯತ್ನ ಸಫಲವಾಯಿತು.”

“ಮಿಸ್. ಮೋಹಿನಿ ಎಲ್ಲಿದ್ದಾರೆ.”

“ಇಂಗ್ಲೆಂಡ್ - ಈಲಿಂಗ್‌ನಲ್ಲಿ”

“ಈಲಿಂಗ್ !!”

ಎಂದು ಮೆಲ್ಲನೆ ರೋಸಿನಿ,

“ಯಾರ ಜತೆ ?”

“ಗಿಲ್ಬರ್ಟ್ ನಾರ್ಟನ್.”

“ಗಿಲ್ಬರ್ಟ್ ನಾರ್ಟನ್ - ಆ ನಾಯಿ?”

ಎಂದವರೇ ಚಿಟ್ಟನೆ

’ಓ! ಕ್ರೈಸ್ಟ್’

ಎಂದು ಮೂರ್ಛಿತರಾದರು.

ಥಾಮಸ್ ಗಾಬರಿಗೊಂಡು ಫಿಲ್ಲಿಸ್‌ಳನ್ನು ಬರಮಾಡಿದ.

ಫಿಲ್ಲಿಸ್ ಪ್ರಥಮ ಚಿಕಿತ್ಸೆ ಮಾಡಿದಳು.

ನಾಲ್ಕು ನಿಮಿಷಗಳ ನಂತರ ಕಣ್ಣುಬಿಟ್ಟು ನೋಡಿದ ರೋಸಿನಿ,

’ಓ ಕ್ರೈಸ್ಟ್ - ಮೋಹಿನಿ – ಮೋಹಿನಿ’

ಎನ್ನುತ್ತಾ ಮತ್ತೆ ಮೂರ್ಛಾಕ್ರಾಂತರಾದರು.

ಥಾಮಸ್ಸನ ಜಂಘಾಬಲ ಉಡುಗಿ ಹೋಯಿತು.

“ರೋಸಿನಿಯವರ ಪರಿಸ್ಥಿತಿ ಕಠಿಣವಾಗಿದೆ ಮಿಸ್. ಡಾಕ್ಟರನ್ನು ಬರ ಮಾಡುವುದು ಒಳ್ಳೆಯದು” ಎಂದ.

“ದಯೆಯಿಟ್ಟು ನೀವೇ ಫೋನ್ ಮಾಡಿ ಡಾ. ಪಾಲ್ ಕಾಫ್‌ಮನ್ (Paul Kaufmann) ಅವರನ್ನು ಬರುಮಾಡಿ.”

ಮುಕ್ಕಾಲು ಗಂಟೆ ತರುವಾಯ ಬಂದ ಡಾ. ಪಾಲ್ ಕಾಫ್‌ಮನ್ ರೋಸಿನಿಯವರನ್ನು ಪರೀಕ್ಷಿಸಿ ನೋಡಿ,

“ಮಿಸ್ . ರೋಸಿನಿಯವರಿಗೆ ಉತ್ಕಟ ನರದೌರ್ಬಲ್ಯ ಪ್ರಾಪ್ತವಾಗಿದೆ. ಇವರನ್ನು ಹೀಗೆ ಬಿಟ್ಟರೆ ಹುಚ್ಚು ಹಿಡಿಯಬಹುದು.”

“ಏನು ಮಾಡಬೇಕು ಡಾಕ್ಟರ್”

“ನೀವು ಒಪ್ಪುವುದಾದರೆ ಅವರನ್ನು ನನ್ನ ಸ್ಯಾನಿಟೋರಿಯಮ್‌ಗೆ ಕರೆದುಕೊಂಡು ಹೋಗುತ್ತೇನೆ.”

ಕಂಬನಿ ತುಂಬಿದ ಫಿಲ್ಲಿಸ್,

“ಮಿ. ರೋಸಿನಿಯವರಿಗೆ ಗುಣವಾಗುವುದೇ ಡಾಕ್ಟರ್.”

“ಈಗಲೇ ಹೇಳಲಾರೆ - ಮಿಸ್,”

“ಸ್ಯಾನಿಟೋರಿಯಂನಲ್ಲಿ ಅವರು ಎಷ್ಟು ದಿನ ಇರಬೇಕು.”

“ಆರು ತಿಂಗಳಾದರೂ ಇರಬೇಕು.”

“ಅಯ್ಯೋ - ಅವರ ಯೋಜನೆಯೆಲ್ಲಾ ಮಣ್ಣುಗೂಡಿತಲ್ಲ ಡಾಕ್ಟರ್”

“ಯೋಜನೆ ಸಾವಕಾಶವಾಗಿ ಆಗಲಿ ಮಿಸ್. ಮೊದಲು ರೋಸಿನಿಯವರಿಗೆ ಗುಣವಾಗಲಿ”

ಎಂದು ಡಾ. ಪಾಲ್ ಕಾಫ್‌ಮನ್ ತಮ್ಮ ಸ್ಯಾನಿಟೋರಿಯಮ್‌ಗೆ ಫೋನ್ ಮಾಡಿ ’ಆಂಬ್ಯುಲೆನ್ಸ್ ಕಾರ್’ (Ambulance Car) ಕಳಿಸಿಕೊಡುವಂತೆ ತಿಳಿಸಿದರು.

ಮಾರನೆಯ ಬೆಳಿಗ್ಗೆ ಪತ್ರಿಕೆಗಳು;

“ರಾಯಲ್ ಸ್ವಾನ್ ಚಿತ್ರದ ನಿರ್ಮಾತೃ - ದಿಗ್ದರ್ಶಕರಾದ ಪ್ರಸಿದ್ಧ ರೋಸಿನಿಯವರು ನರದೌರ್ಬಲ್ಯಕ್ಕೀಡಾಗಿ ಡಾ. ಪಾಲ್ ಕಾಫ್‌ಮನ್ ಅವರ ಸ್ಯಾನಿಟೋರಿಯಮ್‌ನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ”

ಎಂದು ಪ್ರಕಟಿಸಿದವು.